# ವಿಶೇಷ ಪತ್ರಿಕೆ

| ಭಾಗ – **IV-A** | ಬೆಂಗಳೂರು, ಶನಿವಾರ, ಮಾರ್ಚ್ ೩೧, ೨೦೧೨ (ಚೈತ್ರ ೧೧, ಶಕ ವರ್ಷ ೧೯೩೪) | ನಂ. ೨೫೫ |
|---|---|---|


## AGRICULTURE SECRETARIAT

### NOTIFICATION

**No. AGD 39 ANE 2011, Bangalore, Dated : 28/03/2012**

The draft of the following rules further to amend the Karnataka Agriculture Services (Recruitment) Rules, 1999, which the Government of Karnataka proposes to make in exercise of the power conferred by sub-section(1) of the section 3 read with section 8 of the Karnataka State Civil Services Act, 1978 (Karnataka Act 14 of 1990) is hereby published as required by clause (a) of sub-section (2) of section 3 of the said Act, for the information of all persons likely to be affected thereby and notice is hereby given that the said draft will be taken into consideration after fifteen days from the date of its publication in the Official Gazette.

Any objections or suggestions which may be received by the State Government from any person with respect to the said draft before the expiry of the period specified above will be considered by the State Government. Objections or suggestions may be addressed to the Secretary to Government, Agriculture Department, Multi Storied Buildings, Dr. Ambedkar Veedhi, Bangalore-560 001.

### DRAFT RULES

1. Title of Commencement.- (1) These rules may be called the Karnataka Agriculture Services (Recruitment) (Amendment) Rules, 2012.

(2) They shall come into force from the date of their publication in the Office Gazette.

2. Amendment of Schedule.- In the Karnataka Agriculture Services (Recruitment) Rules, 1999, in the schedule, in the entries relating to the category of post of "Administrative Officer" at Serial No. 14, in Column (4) and (5), for the words "Assistant Administrative Officer" the words "Administrative Assistant" shall be substituted.

By Order and in the name of the Governor of Karnataka,
**MANJUNATH PATIL**
Under secretary to Government,
Department of Agriculture (Services)


# ವಿಶೇಷ ಪತ್ರಿಕೆ

| ಭಾಗ – **I** | ಬೆಂಗಳೂರು, ಶನಿವಾರ, ಮಾರ್ಚ್ ೩೧, ೨೦೧೨ (ಚೈತ್ರ ೧೧, ಶಕ ವರ್ಷ ೧೯೩೪) | ನಂ. ೨೫೬ |
|---|---|---|


## ಕರ್ನಾಟಕ ಸರ್ಕಾರದ ನಡವಳಿಗಳು

### ಆರ್ಥಿಕ ಸಚಿವಾಲಯ

ವಿಷಯ:– ಕರ್ನಾಟಕ ರಾಜ್ಯ ಪಾನೀಯ ನಿಗಮ ನಿಯಮಿತದ ಮಾರ್ಜಿನ್ (Margin) ನಿಗದಿಪಡಿಸುವ ಬಗ್ಗೆ.

**ಪ್ರಸ್ತಾವನೆ:**

2012–13ನೇ ಸಾಲಿನ ಆಯವ್ಯಯ ಭಾಷಣದ ಕಂಡಿಕೆ 273 ರಲ್ಲಿ ಕರ್ನಾಟಕ ರಾಜ್ಯ ಪಾನೀಯ ನಿಗಮ ನಿಯಮಿತದ ಮಾರ್ಜಿನ್ ಅನ್ನು ಶೇಕಡ 0.5ಕ್ಕೆ ಕಡಿಮೆಗೊಳಿಸುವುದಾಗಿ ಘೋಷಿಸಲಾಗಿರುತ್ತದೆ. ಈ ಹಿನ್ನೆಲೆಯಲ್ಲಿ ಕೆಳಕಂಡ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಆಇ 03 ಪಿಇಎಸ್ 2012, ಬೆಂಗಳೂರು, ದಿನಾಂಕ: 31–03–2012.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ, ಸರ್ಕಾರವು, ಡಿಸ್ಟ್ರಿಬ್ಯೂಟರ್ ಸನ್ನದುದಾರರಾದ ಕರ್ನಾಟಕ ರಾಜ್ಯ ಪಾನೀಯ ನಿಗಮ ನಿಯಮಿತವು ದಿನಾಂಕ 01–04–2012 ರಿಂದ ಜಾರಿಗೆ ಬರುವಂತೆ ಮದ್ಯದ ಮೂಲ ಬೆಲೆಯ ಮೇಲೆ ಶೇಕಡ 0.5ನ್ನು ಮಾರ್ಜಿನ್ (Margin) ಆಗಿ ವಿಧಿಸತಕ್ಕದ್ದೆಂದು ನಿಗದಿಪಡಿಸಿದೆ.

ಕರ್ನಾಟಕ ರಾಜ್ಯ ಪಾನೀಯ ನಿಗಮಕ್ಕೆ ವಿತರಕರ ಸನ್ನದು ಮಂಜೂರು ಮಾಡಿರುವುದಕ್ಕೆ ಕರ್ನಾಟಕ ರಾಜ್ಯ ಪಾನೀಯ ನಿಗಮವು ಸರ್ಕಾರಕ್ಕೆ ಪಾವತಿಸಬೇಕಾದ ಪ್ರಿವಿಲೇಜ್ ಫೀ ಬಗ್ಗೆ ಆದೇಶವನ್ನು ಪ್ರತ್ಯೇಕವಾಗಿ ಹೊರಡಿಸಲಾಗುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಡಿ.ಎನ್.ವೆಂಕಟಚಲಪತಿ**
ಸರ್ಕಾರದ ಅಧೀನ ಕಾರ್ಯದರ್ಶಿ,
**ಆರ್ಥಿಕ ಇಲಾಖೆ** (ಅಬಕಾರಿ).

# ವಿಶೇಷ ಪತ್ರಿಕೆ

ಭಾಗ – **IV-A** ‖ ಬೆಂಗಳೂರು, ಮಂಗಳವಾರ, ಏಪ್ರಿಲ್ ೩, ೨೦೧೨ (ಚೈತ್ರ ೧೪, ಶಕ ವರ್ಷ ೧೯೩೪) ‖ ನಂ. ೨೬೩

## ನಗರಾಭಿವೃದ್ಧಿ ಸಚಿವಾಲಯ

## ಅಧಿಸೂಚನೆ

### ಸಂಖ್ಯೆ: ನಅಇ 74 ಎಂಎಲ್ಆರ್ 2012, ಬೆಂಗಳೂರು, ದಿನಾಂಕ: 3ನೇ ಏಪ್ರಿಲ್, 2012

ಕರ್ನಾಟಕ ಮಹಾನಗರಪಾಲಿಕೆಗಳ ಅಧಿನಿಯಮ 32ರಲ್ಲಿ ಅಗತ್ಯವಿರುವಂತೆ **ಗುಲಬರ್ಗಾ** ಮಹಾನಗರಪಾಲಿಕೆಯ ಮಹಾಪೌರರ ಹಾಗೂ ಉಪ ಮಹಾಪೌರರ ಚುನಾವಣೆ ಫಲಿತಾಂಶವನ್ನು ಈ ಮೂಲಕ ಸಾರ್ವಜನಿಕರ ಅವಗಾಹನೆಗಾಗಿ ಪ್ರಚುರಪಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ.ವಿ.ರಾಮಪ್ಪ**
ಸರ್ಕಾರದ ಅಧೀನ ಕಾರ್ಯದರ್ಶಿ
ನಗರಾಭಿವೃದ್ಧಿ ಇಲಾಖೆ

ಚುನಾವಣಾ ವಿವರಣಾ ಪಟ್ಟಿ

**ಗುಲಬರ್ಗಾ** ಮಹಾನಗರಪಾಲಿಕೆಯ ಮಹಾಪೌರರ ಚುನಾವಣೆ
(15ನೇ ಅವಧಿ)

| **ಕ್ರಮ ಸಂಖ್ಯೆ** | **ಅಭ್ಯರ್ಥಿಯ ಹೆಸರು** | **ಪಡೆದ ಸಿಂಧುವಾದ ಮತಗಳು** |
|---|---|---|
| 1 | ಶ್ರೀ ರಮಾನಂದ ಪೋಪಟಲಾಲ ಉಪಾಧ್ಯಾಯ | 14 |
| 2 | ಶ್ರೀ ಸೋಮಶೇಖರ ಮೇಲಮನಿ | 44 |

1. ಪಡೆದ ಸಿಂಧುವಾದ ಮತಗಳ ಒಟ್ಟು ಸಂಖ್ಯೆ : 58
2. ತಿರಸ್ಕೃತವಾದ ಮತಗಳ ಒಟ್ಟು ಸಂಖ್ಯೆ : --
3. ತಟಸ್ಥವಾದ ಮತಗಳ ಒಟ್ಟು ಸಂಖ್ಯೆ : --

ಶ್ರೀ.ಸೋಮಶೇಖರ ಮೇಲಮನಿ ಇವರು ಮಹಾಪೌರರ ಸ್ಥಾನಕ್ಕೆ ಬಹುಮತದಿಂದ ಹಾಗೂ ಕ್ರಮಬದ್ಧವಾಗಿ ಚುನಾಯಿತರಾಗಿದ್ದಾರೆಂದು ನಾನು ಈ ಮೂಲಕ ಘೋಷಿಸುತ್ತೇನೆ.

ಸಹಿ/–
ಪ್ರಾದೇಶಿಕ ಆಯುಕ್ತರು,
ಗುಲಬರ್ಗಾ ವಿಭಾಗ,
ಗುಲಬರ್ಗಾ.

ಚುನಾವಣಾ ವಿವರಣಾ ಪಟ್ಟಿ

**ಗುಲಬರ್ಗಾ** ಮಹಾನಗರಪಾಲಿಕೆಯ ಉಪ ಮಹಾಪೌರರ ಚುನಾವಣೆ

(15ನೇ ಅವಧಿ)

| ಕ್ರಮ ಸಂಖ್ಯೆ | ಅಭ್ಯರ್ಥಿಯ ಹೆಸರು | ಪಡೆದ ಸಿಂಧುವಾದ ಮತಗಳು |
|---|---|---|
| 1 | ಶ್ರೀಮತಿ ಚಂದ್ರಕಲಾ ಸಿ. ಅಳಂದಕರ್ | 14 |
| 2 | ಶ್ರೀಮತಿ ಸಯಿದಾ ಬೇಗಂ ರೋಜಾ | 44 |

1. ಪಡೆದ ಸಿಂಧುವಾದ ಮತಗಳ ಒಟ್ಟು ಸಂಖ್ಯೆ : 58
2. ತಿರಸ್ಕೃತವಾದ ಮತಗಳ ಒಟ್ಟು ಸಂಖ್ಯೆ : --
3. ತಟಸ್ಥವಾದ ಮತಗಳ ಒಟ್ಟು ಸಂಖ್ಯೆ : --

ಶ್ರೀಮತಿ ಸಯಿದಾ ಬೇಗಂ ರೋಜಾ, ಇವರು ಉಪ ಮಹಾಪೌರರ ಸ್ಥಾನಕ್ಕೆ ಬಹುಮತದಿಂದ ಹಾಗೂ ಕ್ರಮಬದ್ಧವಾಗಿ ಚುನಾಯಿತರಾಗಿದ್ದಾರೆಂದು ನಾನು ಈ ಮೂಲಕ ಘೋಷಿಸುತ್ತೇನೆ.

ಸಹಿ/-
ಪ್ರಾದೇಶಿಕ ಆಯುಕ್ತರು,
ಗುಲಬರ್ಗಾ ವಿಭಾಗ,
ಗುಲಬರ್ಗಾ

# ವಿಶೇಷ ಪತ್ರಿಕೆ

| ಭಾಗ – I | ಬೆಂಗಳೂರು, ಶನಿವಾರ, ಏಪ್ರಿಲ್ ೭, ೨೦೧೨ (ಚೈತ್ರ ೧೮, ಶಕ ವರ್ಷ ೧೯೩೪) | ನಂ. ೨೬೪ |
|---|---|---|

## ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವಾಲಯ

### ತಿದ್ದುಪಡಿ ಅಧಿಸೂಚನೆ

**ಸಂಖ್ಯೆ: ಗ್ರಾಅಪ 356 ಪಬವ 2011, ಬೆಂಗಳೂರು, ದಿನಾಂಕ: 5/4/2012**

ಸರ್ಕಾರದ ಆದೇಶ ಸಂಖ್ಯೆ: ಗ್ರಾಅಪ 356 ಪಬವ 2011, ದಿನಾಂಕ: 24/3/2012ರಲ್ಲಿನ ಪುಟ-1 (ಒದಲಾಗಿದೆ ಭಾಗದ ಕ್ರಮ ಸಂಖ್ಯೆ: 02) ಮತ್ತು ಪುಟ-3ರ 2ನೇ ಪ್ಯಾರಾದಲ್ಲಿ ದಿನಾಂಕ: 30.08.2001ರ ಬದಲಾಗಿ 30.08.2011 ಎಂದು ತಿದ್ದಿ ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಹೆಚ್.ಬಿ. ರಘುನಾಥ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಗ್ರಾಮೀಣಾಭಿವೃದ್ಧಿ ಮತ್ತು ಪಂ. ರಾಜ್ ಇಲಾಖೆ

# ವಿಶೇಷ ಪತ್ರಿಕೆ

| ಭಾಗ – III | ಬೆಂಗಳೂರು, ಸೋಮವಾರ, ಏಪ್ರಿಲ್ ೯, ೨೦೧೨ (ಚೈತ್ರ ೨೦, ಶಕ ವರ್ಷ ೧೯೩೪) | ನಂ. ೨೬೫ |
|---|---|---|


## ಜಿಲ್ಲಾಧಿಕಾರಿಯವರ ಕಾರ್ಯಾಲಯ, ತುಮಕೂರು ಜಿಲ್ಲೆ, ತುಮಕೂರು

### ಅಧಿಸೂಚನೆ

**ನಂ. ಚುನಾವಣೆ (2) ಸಿಆರ್ 198/10–11, ದಿನಾಂಕ: 09–04–2012**

ನಿರ್ದೇಶಕರು, ಕೃಷಿ ಮಾರಾಟ ಇಲಾಖೆ, ಬೆಂಗಳೂರು ರವರ ಅ.ಸ.ಪತ್ರ. ಸಂಖ್ಯೆ, ಕೃ.ಮಾ.ಇ./98/ಚುನಾವಣೆ, 2010 ದಿನಾಂಕ: 6–1–2011 ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ ವ್ಯವಹಾರ (ನಿಯಂತ್ರಣ ಮತ್ತು ಅಭಿವೃದ್ಧಿ) ಅಧಿನಿಯಮ 1966ರ ಕಲಂ 2(2), 11(1)(i), ಕಲಂ 11(2) ಮತ್ತು 14(1)(i), ಹಾಗೂ ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ ವ್ಯವಹಾರ (ನಿಯಂತ್ರಣ ಮತ್ತು ಅಭಿವೃದ್ಧಿ) ನಿಯಮಾವಳಿಗಳು 1968 ರ ನಿಯಮ 3(1)(2),5, 5(17)(ಎ) ಮತ್ತು 5ಎ ಪ್ರಕಾರ **ಹುಳಿಯಾರು** ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಯ, ಕೃಷಿಕ ಮತಕ್ಷೇತ್ರಗಳ ಮತದಾರರ ಪಟ್ಟಿಗಳನ್ನು ಸಮಗ್ರವಾಗಿ ಪರಿಷ್ಕರಿಸಿ ಚುನಾವಣಾ ಕ್ಷೇತ್ರಗಳ ಪ್ರಾದೇಶಿಕ ವ್ಯಾಪ್ತಿಗಳನ್ನು ನಿರ್ಧರಿಸಿ ಪರಿಷ್ಕೃತ ಮತದಾರರ ಪಟ್ಟಿಗಳ ಅಂಕಿ ಅಂಶಗಳನ್ವಯ ಹನ್ನೊಂದು ಕೃಷಿಕ ಕ್ಷೇತ್ರಗಳ ಪ್ರಾದೇಶಿಕ ವ್ಯಾಪ್ತಿಯನ್ನು ನಿರ್ಧರಿಸಿ 2005ರ ಕಳೆದ ಚುನಾವಣೆಯಲ್ಲಿ ನಿಗಧಿಪಡಿಸಿದ ಮೀಸಲಾತಿ ಪುನರಾವರ್ತನೆಯಾಗದಂತೆ ಸರದಿಯಂತೆ ಮೀಸಲಾತಿ ನಿಗಧಿಪಡಿಸಿದೆ.

ಪ್ರಯುಕ್ತ ತುಮಕೂರು ಜಿಲ್ಲಾಧಿಕಾರಿಯಾದ ಆರ್.ಕೆ.ರಾಜು, ಭಾ.ಆ.ಸೇ., ನಾನು ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ ವ್ಯವಹಾರ (ನಿಯಂತ್ರಣ ಮತ್ತು ಅಭಿವೃದ್ಧಿ) ಅಧಿನಿಯಮ 1966ರ ಕಲಂ 14(2)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ 11 ಏಕಸದಸ್ಯ ಕೃಷಿಕ ಕ್ಷೇತ್ರಗಳ ಪ್ರಾದೇಶಿಕ ವ್ಯಾಪ್ತಿಗೆ 11 ಸ್ಥಾನಗಳನ್ನು ನಿರ್ಧರಿಸಿ, ಈ ಪೈಕಿ ಒಂದು ಮಹಿಳೆ, ಒಂದು ಅನುಸೂಚಿತ ಜಾತಿ, ಒಂದು ಅನುಸೂಚಿತ ಪಂಗಡ, ಒಂದು ಹಿಂದುಳಿದ 'ಅ' ಪ್ರವರ್ಗ ಹಾಗೂ ಒಂದು ಹಿಂದುಳಿದ 'ಬ' ಪ್ರವರ್ಗದ ಸ್ಥಾನವನ್ನು ಮೀಸಲಿರಿಸಿರುತ್ತೇನೆ. ಈ ಕೆಳಕಾಣಿಸಿದ ಕೋಷ್ಟಕದ ಅಂಕಣ (2)ರ ಪ್ರಾದೇಶಿಕ ಚುನಾವಣಾ ಕ್ಷೇತ್ರಕ್ಕೆ ಮೀಸಲಿರಿಸಿದ ಸ್ಥಾನಗಳ ವಿವರವನ್ನು ಅಂಕಣ (5)ರಲ್ಲಿ ನಮೂದಿಸಲಾಗಿದೆ ಎಂದು ಈ ಮೂಲಕ ಅಧಿಸೂಚಿಸಿರುತ್ತೇನೆ.

### ಅನುಸೂಚಿ

### ಹುಳಿಯಾರು ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಯ ವ್ಯಾಪ್ತಿಯ ಕ್ಷೇತ್ರಗಳು

| ಕ್ರ ಸಂ | ಕ್ಷೇತ್ರದ ಹೆಸರು | ಕ್ಷೇತ್ರದ ಪ್ರಾದೇಶಿಕ ವ್ಯಾಪ್ತಿ | | ಚುನಾಯಿಸ ಬೇಕಾದ ಸದಸ್ಯರ ಸಂಖ್ಯೆ | ನಿಗಧಿ ಪಡಿಸಲಾದ ಮೀಸಲಾತಿ |
|---|---|---|---|---|---|
| 1 | 2 | 3 | | 4 | 5 |
| 1 | 01–ಯಳನಡು | 1 | ಯಳನಡು | ಒಂದು | ಹಿಂದುಳಿದ ವರ್ಗ–ಅ |
| | | 2 | ಸಿಂಗಾಪುರ | | |
| | | 3 | ತಮ್ಮಡಿಹಳ್ಳಿ | | |
| | | 4 | ಕೆರೆಸೂರಗೊಂಡನಹಳ್ಳಿ | | |
| | | 5 | ಕೋರಗೆರೆ | | |
| | | 6 | ಭಟ್ಟರಹಳ್ಳಿ | | |
| | | 7 | ಮೋಟಿಹಳ್ಳಿ | | |
| | | 8 | ಡಿಂಕನಹಳ್ಳಿ | | |
| | | 9 | ಬರಗೀಹಳ್ಳಿ | | |
| | | 10 | ಸಾಲಾಪುರ | | |
| | | 11 | ತಿಮ್ಮಲಾಪುರ | | |
| | | 12 | ಸೀಗೇಬಾಗಿ | | |
| | | 13 | ನಂದೀಹಳ್ಳಿ | | |
| | | 14 | ತೊರೆಸೂರಗೊಂಡನಹಳ್ಳಿ | | |

| ಕ್ರ ಸಂ | ಕ್ಷೇತ್ರದ ಹೆಸರು | ಕ್ಷೇತ್ರದ ಪ್ರಾದೇಶಿಕ ವ್ಯಾಪ್ತಿ | | ಚುನಾಯಿಸ ಬೇಕಾದ ಸದಸ್ಯರ ಸಂಖ್ಯೆ | ನಿಗಧಿ ಪಡಿಸಲಾದ ಮೀಸಲಾತಿ |
|---|---|---|---|---|---|
| 1 | 2 | 3 | | 4 | 5 |
| 2 | 02–ಹುಳಿಯಾರು | 15 | ಹುಳಿಯಾರು | ಒಂದು | ಸಾಮಾನ್ಯ |
| | | 16 | ಕೇಶವಾಪುರ | | |
| | | 17 | ಹುಳಿಯಾರು ಅಮಾನಿಕೆರೆ | | |
| | | 18 | ವಳಗೇರಹಳ್ಳಿ | | |
| | | 19 | ಬಳ್ಳೇಕಟ್ಟೆ | | |
| | | 20 | ಕೆಂಕೆರೆ | | |
| | | 21 | ಗೌಡಗೆರೆ | | |
| | | 22 | ಕುರಿಹಟ್ಟಿ | | |
| | | 23 | ಗಾಣದಾಳು | | |
| | | 24 | ಸೋಮನಹಳ್ಳಿ | | |
| | | 25 | ಗುರುವಾಪುರ | | |
| | | 26 | ಮೇಲನಹಳ್ಳಿ | | |
| | | 27 | ಯಗಚೀಹಳ್ಳಿ | | |
| | | 28 | ಮಾರುಹೊಳೆ | | |
| | | 29 | ಕಂಪನಹಳ್ಳಿ | | |
| | | 30 | ಕಾರೇಹಳ್ಳಿ | | |
| | | 31 | ದೊಡ್ಡಬಿದರೆ | | |
| | | 32 | ಚಿಕ್ಕಬಿದರೆ | | |
| | | 33 | ಕೋಡೀಹಳ್ಳಿ | | |
| | | 34 | ಪೋಚಕಟ್ಟೆ | | |
| 3 | 03–ಹೊಯ್ಸಳಕಟ್ಟೆ | 35 | ಹೊಯ್ಸಳಕಟ್ಟೆ | ಒಂದು | ಪರಿಶಿಷ್ಟ ಜಾತಿ |
| | | 36 | ಬೋರನಕಣಿವೆ | | |
| | | 37 | ಕಲ್ಲೇನಹಳ್ಳಿ | | |
| | | 38 | ಲಕ್ಕೇನಹಳ್ಳಿ | | |
| | | 39 | ಬೆಳ್ಳಾರ | | |
| | | 40 | ಅಂಬಾರಪುರ | | |
| | | 41 | ಮುತ್ತುಗದಹಳ್ಳಿ | | |
| | | 42 | ದಸೂಡಿ | | |
| | | 43 | ನುಲೇನೂರು | | |
| | | 44 | ದಬ್ಬಗುಂಟೆ | | |
| | | 45 | ಮರೆನಡು | | |
| 4 | 04–ತಿಮ್ಮನಹಳ್ಳಿ | 46 | ಬಡಕೇಗುಡ್ಲು | ಒಂದು | ಪರಿಶಿಷ್ಟ ಪಂಗಡ |
| | | 47 | ಮೈಲಕಬ್ಬೆ | | |
| | | 48 | ತಿಮ್ಮನಹಳ್ಳಿ | | |
| | | 49 | ದೊಡ್ಡ ಬೆಳವಾಡಿ | | |
| | | 50 | ಚಿಕ್ಕ ಬೆಳವಾಡಿ | | |
| | | 51 | ಹುಲ್ಲೇನಹಳ್ಳಿ | | |

| ಕ್ರ ಸಂ | ಕ್ಷೇತ್ರದ ಹೆಸರು | ಕ್ಷೇತ್ರದ ಪ್ರಾದೇಶಿಕ ವ್ಯಾಪ್ತಿ | | ಚುನಾಯಿಸ ಬೇಕಾದ ಸದಸ್ಯರ ಸಂಖ್ಯೆ | ನಿಗಧಿ ಪಡಿಸಲಾದ ಮೀಸಲಾತಿ |
|---|---|---|---|---|---|
| 1 | 2 | 3 | | 4 | 5 |
| | | 52 | ಬರಕನಾಳು | | |
| | | 53 | ಅಗ್ರಹಾರ | | |
| | | 54 | ಕುರಿಹಳ್ಳಿಕಾವಲ್ | | |
| | | 55 | ತರೇದಹಳ್ಳಿ | | |
| | | 56 | ಯರೇಹಳ್ಳಿ | | |
| | | 57 | ಹಂದಿಗನಡು | | |
| | | 58 | ಸಂಗೇನಹಳ್ಳಿ | | |
| | | 59 | ವಡ್ಡನಕಲ್ಲಳ್ಳಿ | | |
| | | 60 | ಶಿಡ್ಲಕಟ್ಟೆ | | |
| 5 | 05–ತೀರ್ಥಪುರ | 61 | ತೀರ್ಥಪುರ | ಒಂದು | ಮಹಿಳೆ |
| | | 62 | ಯರೇಕಟ್ಟೆ | | |
| | | 63 | ದೊಡ್ಡರಾಂಪುರ | | |
| | | 64 | ಚಿಕ್ಕರಾಂಪುರ | | |
| | | 65 | ಕಾತ್ರೀಕೆಹಾಲ್ | | |
| | | 66 | ಅಜ್ಜೀಗುಡ್ಡೆ | | |
| | | 67 | ಜಾಣೇಹಾರ್ | | |
| | | 68 | ಹೊಂಬಳಘಟ್ಟ | | |
| | | 69 | ಬರಶಿಡ್ಲೆಹಳ್ಳಿ | | |
| | | 70 | ಸಿಂಗದಹಳ್ಳಿ | | |
| | | 71 | ಕೊಟ್ಟಿಗಲ್ | | |
| | | 72 | ಶ್ರೇಯದ ಹೊಸಹಳ್ಳಿ | | |
| | | 73 | ತಿಮ್ಮಲಾಪುರ | | |
| | | 74 | ಹಾರೋಗೊಂಡನಹಳ್ಳಿ | | |
| | | 75 | ಮದನಮಡು | | |
| | | 76 | ಅಕ್ಕನಹಳ್ಳಿ | | |
| | | 77 | ರಾಮನಹಳ್ಳಿ | | |
| | | 78 | ಸಿದ್ದನಕಟ್ಟೆ | | |
| | | 79 | ಆಶ್ರೀಹಾಳ್ | | |
| | | 80 | ಹನುಮಂತನಹಳ್ಳಿ | | |
| | | 81 | ಗಂಟೇನಹಳ್ಳಿ | | |
| | | 82 | ಮಾದನಹಳ್ಳಿ | | |
| | | 83 | ಪುರಸೇನಹಳ್ಳಿ | | |
| | | 84 | ಬಾಳೇಕೋಣ | | |
| | | 85 | ಹೊನ್ನೇಬಾಗಿ | | |
| | | 86 | ಬುಳ್ಳೇನಹಳ್ಳಿ | | |
| | | 87 | ಗೊಲ್ಲರಹಳ್ಳಿ | | |
| | | 88 | ಹೊಸಹಳ್ಳಿ | | |
| | | 89 | ಭಾವನಹಳ್ಳಿ | | |

| ಕ್ರ ಸಂ | ಕ್ಷೇತ್ರದ ಹೆಸರು | ಕ್ಷೇತ್ರದ ಪ್ರಾದೇಶಿಕ ವ್ಯಾಪ್ತಿ | | ಚುನಾಯಿಸ ಬೇಕಾದ ಸದಸ್ಯರ ಸಂಖ್ಯೆ | ನಿಗಧಿ ಪಡಿಸಲಾದ ಮೀಸಲಾತಿ |
|---|---|---|---|---|---|
| 1 | 2 | 3 | | 4 | 5 |
| 6 | 06–ಕಂದಿಕೆರೆ | 90 | ಕಂದಿಕೆರೆ | ಒಂದು | ಸಾಮಾನ್ಯ |
| | | 91 | ಬೈರಲಿಂಗನಹಳ್ಳಿ | | |
| | | 92 | ಬಾಲೇನಹಳ್ಳಿ | | |
| | | 93 | ಗಂಗನಾಯಕನಹಳ್ಳಿ | | |
| | | 94 | ಮಲ್ಲೇನಹಳ್ಳಿ | | |
| | | 95 | ಗೊಟ್ಟಿಗೇನಹಳ್ಳಿ | | |
| | | 96 | ಕೊಪ್ಪರಿಗೇಹಾಳ್ | | |
| | | 97 | ಸಾದರಹಳ್ಳಿ | | |
| | | 98 | ಗೌರಸಾಗರ | | |
| | | 99 | ಕಾಮನಹಳ್ಳಿ | | |
| | | 100 | ಗೋಪಗೊಂಡನಹಳ್ಳಿ | | |
| | | 101 | ಉಪಲೀಕನಹಳ್ಳಿ | | |
| | | 102 | ಸಾಲ್ಕಟ್ಟೆ | | |
| | | 103 | ಎಂ.ಹೆಚ್.ಕಾವಲ್ | | |
| | | 104 | ಲಕ್ಮೇನಹಳ್ಳಿ | | |
| | | 105 | ಮುದ್ದೇನಹಳ್ಳಿ | | |
| | | 106 | ಅವಳಗೆರೆ | | |
| | | 107 | ದೇವರಹಳ್ಳಿ | | |
| | | 108 | ಕಲ್ಲಹಳ್ಳಿ | | |
| | | 109 | ಬೈರಾಪುರ | | |
| | | 110 | ತಾರೀಕಟ್ಟೆ | | |
| 7 | 07–ಚಿಕ್ಕನಾಯಕನಹಳ್ಳಿ ಕಸಬಾ | 111 | ಚಿ.ನಾ.ಹಳ್ಳಿ (ಗ್ರಾ) | ಒಂದು | ಸಾಮಾನ್ಯ |
| | | 112 | ಬಾಗಾಯ್ತು | | |
| | | 113 | ದಾಸೀಹಳ್ಳಿ | | |
| | | 114 | ಚನ್ನೇನಹಳ್ಳಿ | | |
| | | 115 | ಕೋಡೀಹಳ್ಳಿ | | |
| | | 116 | ಜೋಗೀಹಳ್ಳಿ | | |
| | | 117 | ಕುರುಬರಹಳ್ಳಿ | | |
| | | 118 | ಮಾಳಿಗೇಹಳ್ಳಿ | | |
| | | 119 | ಶ್ಯಾವಿಗೇಹಳ್ಳಿ | | |
| | | 120 | ಸಾವಶೆಟ್ಟಿಹಳ್ಳಿ | | |
| | | 121 | ಬ್ಯಾಲದಕೆರೆ | | |
| | | 122 | ಆಲದಕಟ್ಟೆ | | |
| | | 123 | ತೊನ್ನಲಾಪುರ | | |
| | | 124 | ಜೋಡಿಕಲ್ಲೇನಹಳ್ಳಿ | | |
| | | 125 | ಪಿನ್ನೇನಹಳ್ಳಿ | | |
| | | 126 | ಮೇಲನಹಳ್ಳಿ | | |

| ಕ್ರ ಸಂ | ಕ್ಷೇತ್ರದ ಹೆಸರು | ಕ್ಷೇತ್ರದ ಪ್ರಾದೇಶಿಕ ವ್ಯಾಪ್ತಿ | | ಚುನಾಯಿಸ ಬೇಕಾದ ಸದಸ್ಯರ ಸಂಖ್ಯೆ | ನಿಗಧಿ ಪಡಿಸಲಾದ ಮೀಸಲಾತಿ |
|---|---|---|---|---|---|
| 1 | 2 | 3 | | 4 | 5 |
| | | 127 | ಮಾರಸಂದ್ರ | | |
| | | 128 | ಚಿಕ್ಕೇನಹಳ್ಳಿ | | |
| | | 129 | ಕಾಟೇನಹಳ್ಳಿ(ಬೇ) | | |
| | | 130 | ದಬ್ಬೇಘಟ್ಟ | | |
| | | 131 | ಕೇದಿಗೇಹಳ್ಳಿ | | |
| 8 | 08–ಹಂದನಕೆರೆ | 132 | ಹಂದನಕೆರೆ | ಒಂದು | ಸಾಮಾನ್ಯ |
| | | 133 | ಹಳ್ಳಿತಿಮ್ಲಾಪುರ | | |
| | | 134 | ರಾಮಘಟ್ಟ | | |
| | | 135 | ಪುರದಕಟ್ಟೆ | | |
| | | 136 | ಹುಚ್ಚನಹಳ್ಳಿ | | |
| | | 137 | ಕೆಂಗಲಾಪುರ | | |
| | | 138 | ದೊಡ್ಡಎಣ್ಣೇಗೆರೆ | | |
| | | 139 | ಹೆಚ್.ಎಂ.ಕಾವಲ್ | | |
| | | 140 | ಚೋರಗೊಂಡನಹಳ್ಳಿ | | |
| | | 141 | ಚಿಕ್ಕ ಎಣ್ಣೇಗೆರೆ | | |
| | | 142 | ಬೊಮ್ಮೇನಹಳ್ಳಿ | | |
| | | 143 | ನಡುವನಹಳ್ಳಿ | | |
| | | 144 | ದೊಡ್ಡಹುಲ್ಲೇನಹಳ್ಳಿ | | |
| | | 145 | ಬನ್ನೀಕೆರೆ | | |
| | | 146 | ಕಿಡುಕನಹಳ್ಳಿ | | |
| | | 147 | ಚೌಳಕಟ್ಟೆ | | |
| | | 148 | ಲಿಂಗದಹಳ್ಳಿ | | |
| | | 149 | ಹೊನ್ನಶೆಟ್ಟೀಹಳ್ಳಿ | | |
| | | 150 | ಸಬ್ಬೇನಹಳ್ಳಿ | | |
| | | 151 | ಹರೇನಹಳ್ಳಿ | | |
| | | 152 | ಲಕ್ಷ್ಮೀಪುರ | | |
| | | 153 | ಗೋಪಾಲಪುರ | | |
| | | 154 | ಭೂಮನಕಟ್ಟೆ | | |
| 9 | 09–ಮತ್ತಿಘಟ್ಟ | 155 | ಮತಿಘಟ್ಟ | ಒಂದು | ಸಾಮಾನ್ಯ |
| | | 156 | ಬೆಳಗೀಹಳ್ಳಿ | | |
| | | 157 | ಯಳ್ಳೇನಹಳ್ಳಿ | | |
| | | 158 | ಬರಗೂರು | | |
| | | 159 | ಓಟೀಕೆರೆ | | |
| | | 160 | ಓಟೀಕೆರೆ ತಿಮ್ಲಾಪುರ | | |
| | | 161 | ರಂಗೇನಹಳ್ಳಿ | | |
| | | 162 | ಬಂಗಾರಗೆರೆ | | |
| | | 163 | ಅಂಕಸಂದ್ರ | | |
| | | 164 | ಅಂಕಸಂದ್ರ ಕಾವಲ್ | | |
| | | 165 | ಹೊಸಕೆರೆ | | |
| | | 166 | ಯರೇಕಟ್ಟೆ | | |

| ಕ್ರ ಸಂ | ಕ್ಷೇತ್ರದ ಹೆಸರು | ಕ್ಷೇತ್ರದ ಪ್ರಾದೇಶಿಕ ವ್ಯಾಪ್ತಿ | | ಚುನಾಯಿಸ ಬೇಕಾದ ಸದಸ್ಯರ ಸಂಖ್ಯೆ | ನಿಗಧಿ ಪಡಿಸಲಾದ ಮೀಸಲಾತಿ |
|---|---|---|---|---|---|
| 1 | 2 | 3 | | 4 | 5 |
| | | 167 | ಉಪ್ಪಾರಹಳ್ಳಿ | | |
| | | 168 | ಮಲ್ಲಿಗೆರೆ | | |
| | | 169 | ಕಾಮಲಾಪುರ | | |
| | | 170 | ಡಗ್ಗೇನಹಳ್ಳಿ | | |
| | | 171 | ಬಂದ್ರೇಹಳ್ಳಿ | | |
| | | 172 | ಭೀಮಸಂದ್ರ | | |
| | | 173 | ಕಾನ್ಕೆರೆ | | |
| | | 174 | ದವನದಹೊಸಹಳ್ಳಿ | | |
| | | 175 | ಸೋರಲಮಾವು | | |
| | | 176 | ಬೆಳಗುಲಿ | | |
| | | 177 | ನಿರುವಗಲ್ | | |
| 10 | 10–ಶೆಟ್ಟಿಕೆರೆ | 178 | ಶೆಟೀಕೆರೆ | ಒಂದು | ಹಿಂದುಳಿದ ವರ್ಗ–ಬ |
| | | 179 | ಸೋಮಲಾಪುರ | | |
| | | 180 | ಅಜ್ಜೇನಹಳ್ಳಿ | | |
| | | 181 | ಮಾದೀಹಳ್ಳಿ | | |
| | | 182 | ಗೋಪಾಲನಹಳ್ಳಿ | | |
| | | 183 | ಮಾಕುವಳ್ಳಿ | | |
| | | 184 | ಪೆಮ್ಮಲದೇವರಹಳ್ಳಿ | | |
| | | 185 | ದುಗಡೀಹಳ್ಳಿ | | |
| | | 186 | ಹೆಸರಹಳ್ಳಿ | | |
| | | 187 | ಗೌಡನಹಳ್ಳಿ | | |
| | | 188 | ಸಿದ್ದರಾಮನಗರ | | |
| | | 189 | ಬಾಚೀಹಳ್ಳಿ | | |
| | | 190 | ವಡೇರಹಳ್ಳಿ | | |
| | | 191 | ಬಲ್ಲೇನಹಳ್ಳಿ | | |
| | | 192 | ಕುಪೂರು | | |
| | | 193 | ಮಂಚಸಂದ್ರ | | |
| | | 194 | ತಗಚೀಘಟ್ಟ | | |
| | | 195 | ತಮ್ಮಡೀಹಳ್ಳೀ | | |
| | | 196 | ಬೇವಿನಹಳ್ಳಿ | | |
| | | 197 | ಮಾದಾಪುರ | | |
| | | 198 | ಮಲ್ಲೇನಹಳ್ಳಿ | | |
| | | 199 | ಚಟ್ಟಸಂದ್ರ | | |
| | | 200 | ದಾಸೀಹಳ್ಳಿ | | |
| | | 201 | ಬೆನಕನಕಟ್ಟೆ | | |
| | | 202 | ಅಣೇಕಟ್ಟೆ | | |
| | | 203 | ಯರೇಹಳ್ಳಿ | | |
| | | 204 | ಪುರ | | |
| | | 205 | ಅರಳೀಕೆರೆ | | |

| ಕ್ರ ಸಂ | ಕ್ಷೇತ್ರದ ಹೆಸರು | ಕ್ಷೇತ್ರದ ಪ್ರಾದೇಶಿಕ ವ್ಯಾಪ್ತಿ | | ಚುನಾಯಿಸ ಬೇಕಾದ ಸದಸ್ಯರ ಸಂಖ್ಯೆ | ನಿಗಧಿ ಪಡಿಸಲಾದ ಮೀಸಲಾತಿ |
|---|---|---|---|---|---|
| 1 | 2 | 3 | | 4 | 5 |
| | | 206 | ನವಿಲೆ | | |
| | | 207 | ಕಾರೇಹಳ್ಳಿ | | |
| | | 208 | ಕುರುಬರಹಳ್ಳಿ | | |
| | | 209 | ದಿಬ್ಬದಹಳ್ಳಿ | | |
| 11 | 11–ಜೆ.ಸಿ.ಪುರ | 210 | ಜೆ ಸಿ ಪುರ | ಒಂದು | ಸಾಮಾನ್ಯ |
| | | 211 | ಬ್ಯಾಡರಹಳ್ಳಿ | | |
| | | 212 | ಹಾಲುಗೊಣ | | |
| | | 213 | ಕೃಷ್ಣಸಾಗರಕೆರೆ | | |
| | | 214 | ನಾಗೇನಹಳ್ಳಿ | | |
| | | 215 | ತರಬೇನಹಳ್ಳಿ | | |
| | | 216 | ಕಾಡೇನಹಳ್ಳಿ | | |
| | | 217 | ಮಲಗೊಂಡನಹಳ್ಳಿ | | |
| | | 218 | ಪಂಕಜನಹಳ್ಳಿ | | |
| | | 219 | ಕಂಟಲಗೆರೆ | | |
| | | 220 | ತಿಗಳನಹಳ್ಳಿ | | |
| | | 221 | ಲಕ್ಮಗೊಂಡನಹಳ್ಳಿ | | |
| | | 222 | ಗ್ಯಾರೇಹಳ್ಳಿ | | |
| | | 223 | ಸಾಸಲು | | |
| | | 224 | ಅಗಸರಹಳ್ಳಿ | | |
| | | 225 | ಕೊಡಲಾಗರ | | |
| | | 226 | ಬೇಟೆರಂಗನಹಳ್ಳಿ | | |
| | | 227 | ಚುಂಗನಹಳ್ಳಿ | | |
| | | 228 | ಗೋಡೇಕೆರೆ | | |
| | | 229 | ಸೊಂಡೇನಹಳ್ಳಿ | | |
| | | 230 | ಸೋಮನಹಳ್ಳಿ | | |
| | | 231 | ನಡುವನಹಳ್ಳಿ | | |
| | | 232 | ಬಗ್ಗನಹಳ್ಳಿ | | |
| | | 233 | ಮಂಚೇಕಟ್ಟೆ | | |
| | | 234 | ಬೈರಗಾನಹಳ್ಳಿ | | |
| 12 | 12–ವ್ಯಾಪಾರಗಾರರ ಚುನಾವಣಾ ಕ್ಷೇತ್ರ | | | ಒಂದು | ಸಾಮಾನ್ಯ |
| 13 | 13–ವ್ಯವಸಾಯೋತ್ಪನ್ನ ಮಾರಾಟ ಸಹಕಾರ ಸಂಘದಿಂದ | | | ಒಂದು | ಸಾಮಾನ್ಯ |
| 14 | 14–ಕೃಷಿ ಹುಟ್ಟುವಳಿ ಸಂಸ್ಕರಣ ಸಹಕಾರ ಸಂಘದಿಂದ | | | ಒಂದು | ಸಾಮಾನ್ಯ |

**ಆರ್.ಕೆ. ರಾಜು**
ಜಿಲ್ಲಾಧಿಕಾರಿ,
ತುಮಕೂರು ಜಿಲ್ಲೆ

## ಕರ್ನಾಟಕ ಸರ್ಕಾರದ ನಡವಳಿಗಳು

### ಸಹಕಾರ ಸಚಿವಾಲಯ

**ವಿಷಯ:** **ಮೈಸೂರಿನ ವಿದ್ಯಾವರ್ಧಕ ಸಂಘ (ರಿ) ಈ ಸಂಘಕ್ಕೆ** ಆಡಳಿತಾಧಿಕಾರಿಯನ್ನು ನೇಮಿಸುವ ಬಗ್ಗೆ.

**ಓದಲಾಗಿದೆ:** 1. ಸಹಕಾರ ಸಂಘಗಳ ಜಂಟಿ ನಿಬಂಧಕರು, ಸಂಘ ಸಂಸ್ಥೆಗಳು ಇವರ ಪತ್ರ ಸಂಖ್ಯೆ ಆರ್‌ಸಿಎಸ್/ಎಡಿಎಂ/74/ಎಸ್‌ಓಆರ್–3/2008–09, ದಿನಾಂಕ 2/4/2012.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ಸಹಕಾರ ಸಂಘಗಳ ನಿಬಂಧಕರ ಪತ್ರದಲ್ಲಿ ಮೈಸೂರು ವಿದ್ಯಾವರ್ಧಕ ಸಂಘದ ಬಗ್ಗೆ ಈ ಕೆಳಕಂಡ ಅಂಶಗಳನ್ನು ಪ್ರಸ್ತಾಪಿಸಿರುತ್ತಾರೆ.

1. ಸದರಿ ಸಂಘದ ಆಡಳಿತ ಮಂಡಳಿಯ ಅವಧಿಯು ದಿನಾಂಕ 29/3/2012 ರಂದು ಮುಕ್ತಾಯಗೊಳ್ಳುತ್ತದೆ.
2. ರಿಟ್ ಅರ್ಜಿ ಸಂಖ್ಯೆ 6884/2012 ರಲ್ಲಿ ಮಾನ್ಯ ಉಚ್ಚ ನ್ಯಾಯಾಲಯವು ಆಡಳಿತ ಮಂಡಳಿಯ ಚುನಾವಣೆಯನ್ನು 3 ತಿಂಗಳ ಅವಧಿಯವರೆಗೆ ನಡೆಸದಂತೆ ಮಧ್ಯಂತರ ಆದೇಶ ನೀಡಿದೆ. ಆದರೆ ಆಡಳಿತಾಧಿಕಾರಿ ನೇಮಕ ಮಾಡುವ ಸಂಬಂಧ ಯಾವುದೇ ಆದೇಶ ನೀಡಿರುವುದಿಲ್ಲವೆಂದು ವರದಿ ಮಾಡಿರುತ್ತಾರೆ.
3. ಸಂಘದ ಬೈಲಾದಲ್ಲಿ ಬೈಲಾ ಸಂಖ್ಯೆ 5 ಮತ್ತು 6 (4) ರನ್ವಯ ಆಡಳಿತ ಮಂಡಳಿಯ ಚುನಾವಣೆ ನಡೆಯದಿದ್ದ ಪಕ್ಷದಲ್ಲಿ ಮುಂದಿನ ಚುನಾವಣೆ ಯವರೆಗೆ ಮತ್ತು ನೂತನ ಆಡಳಿತ ಮಂಡಳಿ ಅಧಿಕಾರ ವಹಿಸಿಕೊಳ್ಳುವವರೆಗೂ ಪ್ರಸಕ್ತ ಆಡಳಿತ ಮಂಡಳಿ ಅಧಿಕಾರದಲ್ಲಿ ಮುಂದುವರೆಯುವ ಅವಕಾಶವಿರುತ್ತದೆ ಎಂದು ತಿಳಿಸಿರುತ್ತಾರೆ.

ಆದರೆ ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆ 1960ರ ಕಲಂ 27 ಎ (ಬಿ) ರಲ್ಲಿ ತಿಳಿಸಿರುವಂತೆ ಯಾವುದೇ ಕಾರಣಕ್ಕಾಗಲಿ ಹೊಸ ಆಡಳಿತ ಮಂಡಳಿಯನ್ನು ಪ್ರಸಕ್ತ ಆಡಳಿತ ಮಂಡಳಿಯ ಅವಧಿಯು ಮುಗಿದರೂ ಚುನಾವಣೆ ಮೂಲಕ ರಚಿಸದಿದ್ದರೆ, ಸದರಿ ಸಂಘಕ್ಕೆ ಅವಧಿ ಮುಗಿದ ನಂತರ ಆಡಳಿತಧಿಕಾರಿಯನ್ನು ನೇಮಿಸಬಹುದಾಗಿದ್ದು, ಕಾಯ್ದೆಯಲ್ಲಿನ ಕಾನೂನು, ಸಂಘದ ಬೈಲಾ ಅವಕಾಶವನ್ನು over – ride ಮಾಡುತ್ತದೆಂಬ ಅಂಶವನ್ನು ಸಹಕಾರ ಸಂಘಗಳ ನಿಬಂಧಕರು ವರದಿ ಮಾಡಿರುತ್ತಾರೆ.

ಮೇಲ್ಕಂಡ ಅಂಶಗಳನ್ನು ಕೂಲಂಕಷವಾಗಿ ಪರಿಶೀಲಿಸಿದ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಇ 48 ಸಸಂನೋ 2008, ಬೆಂಗಳೂರು, ದಿನಾಂಕ: 9–4–2012**

ವಿದ್ಯಾವರ್ಧಕ ಸಂಘ (ರಿ), ಮೈಸೂರು, ಈ ಸಂಘದ ಆಡಳಿತ ಮಂಡಳಿ ಅವಧಿಯು ದಿನಾಂಕ: 29/3/2012ಕ್ಕೆ ಮುಕ್ತಾಯವಾಗಿದೆ. ಆದ್ದರಿಂದ ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆ 1960ರ ಕಲಂ 27–ಎ(1)(ಸಿ) ರನ್ವಯ ವಿದ್ಯಾವರ್ಧಕ ಸಂಘ (ರಿ), ಮೈಸೂರು, ಈ ಸಂಘಕ್ಕೆ ದಿನಾಂಕ:30–3–2012 ರಿಂದ ಜಾರಿಗೆ ಬರುವಂತೆ ಆರು (06) ತಿಂಗಳ ಅವಧಿಗೆ ಜಿಲ್ಲಾಧಿಕಾರಿಗಳು ಮೈಸೂರು ಜಿಲ್ಲೆ, ಮೈಸೂರು ಇವರನ್ನು ಆಡಳಿತಾಧಿಕಾರಿಯನ್ನಾಗಿ ನೇಮಿಸಿ ಆದೇಶಿಸಿದೆ.

ಸದರಿ ಅವಧಿಯಲ್ಲಿ ಸಂಘದಲ್ಲಿ ಹಾಲಿ ಇರುವ ಸದಸ್ಯರಿಂದ ಸಂಘಕ್ಕೆ ಚುನಾವಣೆಯನ್ನು ನಡೆಸಿ, ಚುನಾಯಿತ ಆಡಳಿತ ಮಂಡಳಿಗೆ ಅಧಿಕಾರವನ್ನು ಹಸ್ತಾಂತರಿಸುವವರೆಗೆ ಅಥವಾ ಆರು (06) ತಿಂಗಳ ಅವಧಿಗೆ ಇದರಲ್ಲಿ ಯಾವುದು ಮೊದಲು ಅಲ್ಲಿಯವರೆಗೆ ನೇಮಿಸಿದೆ.

ಈ ಆದೇಶವು ರಿಟ್ ಅರ್ಜಿ ಸಂಖ್ಯೆ 6884/2012ರಲ್ಲಿ ರಾಜ್ಯ ಉಚ್ಚ ನ್ಯಾಯಾಲಯವು ನೀಡುವ ಅಂತಿಮ ಆದೇಶಕ್ಕೆ ಒಳಪಟ್ಟಿರುತ್ತದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎ.ಎಸ್.ವಿಶ್ವೇಶ್ವರಯ್ಯ**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಹಕಾರ ಇಲಾಖೆ

# ವಿಶೇಷ ಪತ್ರಿಕೆ

| ಭಾಗ – I | ಬೆಂಗಳೂರು, ಸೋಮವಾರ, ಏಪ್ರಿಲ್ ೯, ೨೦೧೨ (ಚೈತ್ರ ೨೦, ಶಕ ವರ್ಷ ೧೯೩೪) | ನಂ. ೨೬೭ |
|---|---|---|

## ಸಹಕಾರ ಸಚಿವಾಲಯ

### ಆದೇಶ

**ಸಂಖ್ಯೆ: ಸಿಎಂಡಬ್ಲ್ಯೂ/02/ಸಿಎಪಿ/2006, ಬೆಂಗಳೂರು, ದಿನಾಂಕ: 8.3.2012**

ಕರ್ನಾಟಕ ಸರ್ಕಾರ (ಕಾಯನಿರ್ವಹಣೆ) ನಿಯಮಗಳು, 1977ರ ನಿಯಮ 6ರ ಉಪ ನಿಯಮ (1) ರಲ್ಲಿ ಪ್ರಧಾನ ಮಾಡಲ್ಪಟ್ಟ ಅಧಿಕಾರವನ್ನು ಪ್ರಯೋಗಿಸುತ್ತಾ, ಡಿ.ವಿ.ಸದಾನಂದಗೌಡ, ಮುಖ್ಯ ಮಂತ್ರಿ, ಕರ್ನಾಟಕ ಸರ್ಕಾರ ಆದ ನಾನು ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 106 ಮತ್ತು 108ರ ಅಡಿಯಲ್ಲಿ ಸರ್ಕಾರದ ಮುಂದೆ ಇತ್ಯರ್ಥಕ್ಕಾಗಿ ಬಾಕಿ ಇರುವ/ದಾಖಲಾಗುವ ಅಪೀಲು ಮತ್ತು ಪುನರೀಕ್ಷಣಾ ಅರ್ಜಿಗಳನ್ನು ಹಾಗೂ ಕರ್ನಾಟಕ ಸೌಹಾರ್ದ ಸಹಕಾರಿ ಅಧಿನಿಯಮ 1997 (ಕರ್ನಾಟಕ ಅಧಿನಿಯಮ ಸಂಖ್ಯೆ: 17/2000)ರ ಪ್ರಕರಣ 11(8)ರ ಅಡಿಯಲ್ಲಿ ದಾಖಲಾಗುವ ಅಪೀಲುಗಳನ್ನು ವಿಚಾರಣೆ ಮಾಡಿ ನಿರ್ಣಯಿಸಿ ವಿಲೆ ಮಾಡಲು ಸಹಕಾರ ಇಲಾಖೆಯ ಪ್ರಧಾನ ಕಾರ್ಯದರ್ಶಿ/ಕಾರ್ಯದರ್ಶಿಯವರಿಗೆ ವಿಶೇಷವಾಗಿ ನಿರ್ದೇಶನ ನೀಡಿರುತ್ತೇನೆ. ಈ ಆದೇಶವು ಕೂಡಲೇ ಜಾರಿಗೆ ಬಂದಿದ್ದು ಮುಂದಿನ ಆದೇಶದವರೆಗೆ ಜಾರಿಯಲ್ಲಿರುತ್ತದೆ.

**ಡಿ.ವಿ.ಸದಾನಂದಗೌಡ**
ಮುಖ್ಯ ಮಂತ್ರಿ
ಕರ್ನಾಟಕ ಸರ್ಕಾರ

# ವಿಶೇಷ ಪತ್ರಿಕೆ

| ಭಾಗ – IV-A | ಬೆಂಗಳೂರು, ಸೋಮವಾರ, ಏಪ್ರಿಲ್ ೯, ೨೦೧೨ (ಚೈತ್ರ ೨೦, ಶಕ ವರ್ಷ ೧೯೩೪) | ನಂ. ೨೬೮ |
|---|---|---|

## ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಗ್ರಾಅಪ 38 ಪಬವ 2012, ಬೆಂಗಳೂರು, ದಿನಾಂಕ: 9.4.2012**

ಕರ್ನಾಟಕ ರಾಜ್ಯ ಸಿವಿಲ್ ಸೇವಾ ಅಧಿನಿಯಮ 1978 (1990ರ ಕರ್ನಾಟಕ ಅಧಿನಿಯಮ ಸಂ.14)ರ ಕಲಂ 3ರ ಉಪ ಕಲಂ (1)ಸಹವಾಚನ ಕಲಂ 8ರ ಅಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಕರ್ನಾಟಕ ಸಾಮಾನ್ಯ ಸೇವೆ (ಅಭಿವೃದ್ಧಿ ಶಾಖೆ ಹಾಗೂ ಸ್ಥಳೀಯ ಆಡಳಿತ ಶಾಖೆ) (ವೃಂದ ಮತ್ತು ನೇಮಕಾತಿ) ನಿಯಮಗಳು, 2008ಕ್ಕೆ ತಿದ್ದುಪಡಿ ತರಲು ಈ ಕೆಳಕಂಡ ನಿಯಮಗಳ ಕರಡನ್ನು ಕರ್ನಾಟಕ ಸರ್ಕಾರವು ರಚಿಸಲು ಪ್ರಸ್ತಾವಿಸಿದ್ದು, ಸದರಿ ಅಧಿನಿಯಮದ 3ನೇ ಪ್ರಕರಣದ (2)ನೇ ಉಪ ಪ್ರಕರಣದ ಖಂಡ (ಎ)ರಲ್ಲಿ ಅಗತ್ಯಪಡಿಸಲಾದಂತೆ, ಇದರಿಂದ ಬಾಧಿತರಾಗಬಹುದಾದಂತಹ ಎಲ್ಲಾ ವ್ಯಕ್ತಿಗಳ ಮಾಹಿತಿಗಾಗಿ ಪ್ರಕಟಿಸಲಾಗಿದ್ದು, ಸದರಿ ಕರಡು ನಿಯಮಗಳನ್ನು ಅಧಿಕೃತ ರಾಜ್ಯ ಪತ್ರದಲ್ಲಿ ಪ್ರಕಟವಾದ 15 ದಿನಗಳ ಅವಧಿಯ ನಂತರ, ಪರಿಗಣನೆಗೆ ತೆಗೆದುಕೊಳ್ಳಲಾಗುವುದೆಂದು ಈ ಮೂಲಕ ತಿಳಿಸಿದೆ.

ಸದರಿ ಕರಡು ನಿಯಮಗಳ ಬಗ್ಗೆ ರಾಜ್ಯ ಸರ್ಕಾರವು ಯಾವುದೇ ವ್ಯಕ್ತಿಯಿಂದ ಆಕ್ಷೇಪಣೆ ಅಥವಾ ಸಲಹೆಗಳನ್ನು ಮೇಲೆ ನಿಗದಿಪಡಿಸಿದ ಅವಧಿಯೊಳಗೆ ಸ್ವೀಕರಿಸಿದಲ್ಲಿ ಅವುಗಳನ್ನು ರಾಜ್ಯ ಸರ್ಕಾರವು ಪರಿಶೀಲಿಸುವುದು. ಆಕ್ಷೇಪಣೆಗಳು ಹಾಗೂ ಸಲಹೆಗಳನ್ನು ಸರ್ಕಾರದ ಪ್ರಧಾನ ಕಾರ್ಯದರ್ಶಿ, ಗ್ರಾಮೀಣಾಭಿವೃದ್ಧಿ ಮತ್ತು ಪಂ.ರಾಜ್ ಇಲಾಖೆ, ಕರ್ನಾಟಕ ಸರ್ಕಾರ, ಬಹುಮಹಡಿ ಕಟ್ಟಡ, ಬೆಂಗಳೂರು–560 001 ಈ ವಿಳಾಸಕ್ಕೆ ಕಳುಹಿಸಬಹುದಾಗಿದೆ.

#### ಕರಡು ನಿಯಮಗಳು

**1) ಶೀರ್ಷಿಕೆ ಮತ್ತು ಪ್ರಾರಂಭ:–** (1) ಈ ನಿಯಮಗಳನ್ನು ಕರ್ನಾಟಕ ಸಮಾನ್ಯ ಸೇವೆ (ಅಭಿವೃದ್ಧಿ ಶಾಖೆ ಹಾಗೂ ಸ್ಥಳೀಯ ಆಡಳಿತ ಶಾಖೆ) ವೃಂದ ಮತ್ತು ನೇಮಕಾತಿ (ಮೂರನೇ ತಿದ್ದುಪಡಿ) ನಿಯಮಗಳು, 2012 ಎಂದು ಕರೆಯುವುದು.

(2) ಈ ನಿಯಮಗಳು ಅಧಿಕೃತ ರಾಜ್ಯ ಪತ್ರದಲ್ಲಿ ಪ್ರಕಟವಾದ ದಿನಾಂಕದಿಂದ ಜಾರಿಗೆ ಬರತಕ್ಕದ್ದು.

(2) ಅನುಸೂಚಿತ ತಿದ್ದುಪಡಿ:– ಕರ್ನಾಟಕ ಸಾಮಾನ್ಯ ಸೇವೆ (ಅಭಿವೃದ್ಧಿ ಶಾಖೆ ಹಾಗೂ ಸ್ಥಳೀಯ ಆಡಳಿತ ಶಾಖೆ) ವೃಂದ ಮತ್ತು ನೇಮಕಾತಿ ನಿಯಮಗಳು 2008ರ ಅನುಸೂಚಿಯಲ್ಲಿ ಕ್ರಮ ಸಂಖ್ಯೆ:4ರಲ್ಲಿನ (II) ಅಂಕಣ(5)– ಉಪ ನಿರ್ದೇಶಕರು ಮತ್ತು ಪದನಿಮಿತ್ತ ಸರ್ಕಾರದ ಅಧೀನ ಕಾರ್ಯದರ್ಶಿ ವರ್ಗದ ಹುದ್ದೆಗಳಿಗೆ ಸಂಬಂಧಿಸಿದ ನಮೂದುಗಳಲ್ಲಿ–

"ಈ ನಿಯಮಗಳು ಜಾರಿಗೆ ಬಂದ ಒಂದು ವರ್ಷದೊಳಗಾಗಿ ಮೂರು ವರ್ಷಗಳ ಸೇವೆಯನ್ನು ಪೂರ್ಣಗೊಳಿಸಿದ ಅಧಿಕಾರಿಗಳು ಲಭ್ಯವಾಗದಿದ್ದಲ್ಲಿ ಕನಿಷ್ಟ ಒಂದು ವರ್ಷಕ್ಕಿಂತ ಕಡಿಮೆ ಇಲ್ಲದ ಸೇವಾವಧಿಯನ್ನು ಪೂರ್ಣಗೊಳಿಸಿದ ಅಧಿಕಾರಿಗಳನ್ನು ಮುಂಬಡ್ತಿಗೆ ಪರಿಗಣಿಸಬಹುದು" ಎಂಬ ಪದಗಳನ್ನು ಕರ್ನಾಟಕ ಸಾಮಾನ್ಯ ಸೇವೆ (ಅಭಿವೃದ್ಧಿ ಶಾಖೆ ಮತ್ತು ಸ್ಥಳೀಯ ಆಡಳಿತ ಶಾಖೆ) ವೃಂದ ಮತ್ತು ನೇಮಕಾತಿ ನಿಯಮಗಳು (ತಿದ್ದುಪಡಿ) 2012ರಲ್ಲಿ ಅಳವಡಿಸುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಹೆಚ್.ಬಿ. ರಘುನಾಥ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಗ್ರಾಮೀಣಾಭಿವೃದ್ಧಿ ಮತ್ತು ಪಂ.ರಾಜ್ ಇಲಾಖೆ

## RURAL DEVELOPMENT AND PANCHAYAT RAJ SECRETARIAT

### NOTIFICATION

**No. RDP 38 PBV 2012, Bangalore, Dated: 09-04-2012**

The draft of the following rules further to amend the Karnataka General Services(Development Branch and Local Government Branch)(Cadre and Recruitment) Rules, 2008, which the Government of Karnataka proposes to make in exercise of the powers conferred by sub-section(1) of section 3 read with section 8 of the Karnataka State Civil Services Act, 1978(Karnataka Act 14 of 1990) is hereby-published as required by clause(a)of sub-section(2) of section 3 of the said Act, for the information of all persons likely to be affected thereby and notice is hereby given that the said draft will be taken into consideration after fifteen days from the date of its publication in the Official Gazette.

Any objection and suggestion which may be received by the State Government from any person with respect to the said draft before the expiry of the period specified above will be considered by the State Government. Objections and suggestions may be addressed to the Principal Secretary to Government, Rural Development and Panchayat Raj Department, M.S.Building, Dr.Ambedkar Veedi, Bangalore-1.

**DRAFT RULES**

**1. Title and Commencement.-** (1) These rules may be called the Karnataka General Services(Development Branch and Local Government Branch)(Cadre and Recruitment)(Amendment) Rules 2012.

(2) It shall come into force from the date its publication in the official Gazette.

**2. Amendment of the Schedule.-** In the Karnataka General Service(Development Branch and Local Government Branch(Cadre and Recruitment) Rules, 2008, in the schedule, in the entries relating to the category of the posts of Deputy Secretary, Panchayat Raj (Senior Scale)at Serial no.4, in Column (5) the following proviso shall be inserted at the end, namely.-

"Provided that for a period of one year from date of the commencement of the Karnataka General Services(Development Branch and Local Government Branch(Cadre and Recruitment)(Amendment) Rules, 2012, if no suitable person who has put in not less than three years of service is available, a person who has put in not less than one year of service may be considered for promotion"

By order and in the name of the Governor of Karnataka,

**H.B.Raghunath**

Under Secretary to Government,

Rural Development and Panchayat Raj Department

# ವಿಶೇಷ ಪತ್ರಿಕೆ

| ಭಾಗ – **IV-A** | ಬೆಂಗಳೂರು, ಬುಧವಾರ, ಏಪ್ರಿಲ್ ೧೧, ೨೦೧೨ (ಚೈತ್ರ ೨೨, ಶಕ ವರ್ಷ ೧೯೩೪) | ನಂ. ೨೬೯ |
|---|---|---|

## FINANCE SECRETARIAT

### CORRIGENDUM

### No. FD 57 CSL 2012, Bangalore, Dated: 11.04.2012

In Notification-X No. FD 57 CSL 2012 dated: 31.3.2012 published in the Karnataka Extraordinary Gazette Part IV–A dated. 31.3.2012 for the words **"one lakh and twenty-five kilo litres"** appearing in last line may be read as **"one lakh and twenty five thousand kilo litres".**

By order and in the name of the Governor Karnataka.

**D.R.SHASHIDHAR**
Under Secretary to Government,
Finance Department (C.T-1)

# ವಿಶೇಷ ಪತ್ರಿಕೆ

| ಭಾಗ – **IV-A** | ಬೆಂಗಳೂರು, ಬುಧವಾರ, ಏಪ್ರಿಲ್ ೧೧, ೨೦೧೨ (ಚೈತ್ರ ೨೨, ಶಕ ವರ್ಷ ೧೯೩೪) | ನಂ. ೨೭೦ |
|---|---|---|

## EDUCATION SECRETARIAT

### NOTIFICATION

### No. ED 60 TPU 2010(P-4), Bangalore, dated 11th April 2012

Whereas the draft of the Karnataka General Service (Pre-University Education Department) (Recruitment to the cadre of Lecturers of Government Pre-University Colleges) (Special Recruitment) (Amendment) Rules, 2012 was published as required by sub-section (1) of section 3 read with section 8 of the Karnataka State Civil Services Act, 1978 (Karnataka Act 14 of 1990) in Notification No. ED 60 TPU 2010 (P-4) dated 15th March 2012 in part-IV-A of the Karnataka Gazette dated 16th March 2012 inviting objections and suggestions from all persons likely to be affected thereby within fifteen days from the date of its publication in the official Gazette.

And whereas said Gazette was made available to the public on 16th March 2012.

And whereas the objections and suggestions received within the period specified above, have been considered by the Government.

Now therefore in exercise of the powers conferred by sub-section (1) of section 3 read with section 8 of the Karnataka State Civil Services Act, 1978 (Karnataka Act 14 of 1990), the Government of Karnataka hereby makes the following rules, namely:-

### RULES

**1. Title and commencement.-** (1) These rules may be called the Karnataka General Service (Pre-University Education Department) (Recruitment to the cadre of Lecturers of Government Pre-University Colleges) (Special Recruitment) (Amendment) Rules, 2012.

(2) They shall come into force from the date of their publication in the official Gazette.

**2. Amendment of rule 4.-** In the Karnataka General Service (Pre-University Education Department) (Recruitment to the cadre of Lecturers of Government Pre-University Colleges) (Special) Rules, 2011 (hereinafter referred to as the said rules) in rule 4, after sub-clause (iii) of clause(b), for the proviso, the following shall be substituted, namely:-

"Provided that the persons having master degree in second class in respective subjects, and appointed under the rules, shall pass bachelor degree of education (B.Ed) or its equivalent at their own cost, within four years from the date of appointment.

Provided further that, notwithstanding anything contained in the Karnataka Civil Services (Probation) Rules, 1977, the period of probation shall be four years for the persons appointed under these rules.

"Provided also that candidates appointed under these rules, who have not passed B.Ed or its equivalent with in a period of four years from the date of appointment, shall be discharged from service"

**3. Amendment of schedule.-** In the schedule to the said rules, for serial number 3 and 4 the entries relating there to in column (1), (2) and (3) the following shall be substituted, namely:-

| | | |
|---|---|---|
| "3. | Lecturer in Urdu | Urdu or Persian |
| 4. | Lecturer in Sanskrit | Sanskrit or Vidwat" |

By order and in the name of Governor of Karnataka

**S.H. Kuriyavar**
Under Secretary to Government,
Education Department (Pre-University Education)

# ವಿಶೇಷ ಪತ್ರಿಕೆ

| ಭಾಗ – **IV-A** | ಬೆಂಗಳೂರು, ಗುರುವಾರ, ಏಪ್ರಿಲ್ ೧೨, ೨೦೧೨ (ಚೈತ್ರ ೨೩, ಶಕ ವರ್ಷ ೧೯೩೪) | ನಂ. ೨೭೨ |
|---|---|---|

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಸಿಆಸುಇ 15 ಎಸ್‌ಎಂಆರ್ 2010, ಬೆಂಗಳೂರು, ದಿನಾಂಕ: 12.4.2012**

ಕರ್ನಾಟಕ ಸರ್ಕಾರಿ ನೌಕರರ (ವೈದ್ಯಕೀಯ ಹಾಜರಾತಿ) ನಿಯಮಗಳು 1963 ಇದನ್ನು ಮತ್ತಷ್ಟು ತಿದ್ದುಪಡಿ ಮಾಡುವುದಕ್ಕೆ ದಿನಾಂಕ 19–03–2012 ರ ಅಧಿಸೂಚನೆ ಸಂಖ್ಯೆ: ಸಿಆಸುಇ 15 ಎಸ್‌ಎಂಆರ್ 2010 ರಲ್ಲಿ ಪ್ರಕಟಿಸಿರುವ ಈ ಮುಂದಿನ ನಿಯಮಗಳ ಕರಡನ್ನು ಅಧಿಕೃತ ರಾಜ್ಯಪತ್ರದಲ್ಲಿ ಇದರ ಪ್ರಕಟಣೆಯ ದಿನಾಂಕದಿಂದ ಹದಿನೈದು ದಿನಗಳೊಳಗಾಗಿ ಅದರಿಂದ ಬಾಧಿತರಾಗುವ ಸಂಭವವಿರುವ ಎಲ್ಲ ವ್ಯಕ್ತಿಗಳಿಂದ ಆಕ್ಷೇಪಣೆಗಳನ್ನು ಮತ್ತು ಸಲಹೆಗಳನ್ನು ಆಹ್ವಾನಿಸಿ ದಿನಾಂಕ 19–03–2012 ರ ಕರ್ನಾಟಕ ವಿಶೇಷ ರಾಜ್ಯಪತ್ರದ ಭಾಗ IV–ಎ, ಸಂಖ್ಯೆ: 193 ರಲ್ಲಿ ಕರ್ನಾಟಕ ರಾಜ್ಯ ಸಿವಿಲ್ ಸೇವೆಗಳ ಅಧಿನಿಯಮ 1978 (1990 ರ ಕರ್ನಾಟಕ ಅಧಿನಿಯಮ 14)ರ 3ನೇ ಪ್ರಕರಣದ (2) ನೇ ಉಪ ಪ್ರಕರಣದ ಮೂಲಕ ಅಗತ್ಯಪಡಿಸಲಾದಂತೆ ಪ್ರಕಟಿಸಲಾಗಿರುವುದರಿಂದ;

ಮತ್ತು ಸದರಿ ರಾಜ್ಯ ಪತ್ರವು ದಿನಾಂಕ 19–03–2012ರಂದು ಸಾರ್ವಜನಿಕರಿಗೆ ಲಭ್ಯವಾಗುವಂತೆ ಮಾಡಿರುವುದರಿಂದ;

ಮತ್ತು ಸದರಿ ಕರಡಿನ ಮೇಲೆ ಯಾವುದೇ ಆಕ್ಷೇಪಣೆಗಳು/ಸಲಹೆಗಳು ರಾಜ್ಯ ಸರ್ಕಾರದಲ್ಲಿ ಸ್ವೀಕೃತವಾಗಿರುವುದಿಲ್ಲ.

ಆದ್ದರಿಂದ, ಈಗ ಕರ್ನಾಟಕ ರಾಜ್ಯ ಸಿವಿಲ್ ಸೇವೆಗಳ ಅಧಿನಿಯಮ 1978 (1990 ರ ಕರ್ನಾಟಕ ಅಧಿನಿಯಮ 14)ರ 8ನೇ ಪ್ರಕರಣದೊಂದಿಗೆ ಓದಿಕೊಂಡ 3ನೇ ಪ್ರಕರಣದ (1) ನೇ ಉಪ ಪ್ರಕರಣದ ಮೂಲಕ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು ಈ ಮೂಲಕ ಕೆಳಕಂಡ ನಿಯಮಗಳನ್ನು ರಚಿಸುತ್ತದೆ, ಎಂದರೆ:–

**ನಿಯಮಗಳು**

**1. ಶೀರ್ಷಿಕೆ ಮತ್ತು ಪ್ರಾರಂಭ:–** (1) ಈ ನಿಯಮಗಳನ್ನು ಕರ್ನಾಟಕ ಸರ್ಕಾರಿ ನೌಕರರ (ವೈದ್ಯಕೀಯ ಹಾಜರಾತಿ) (ತಿದ್ದುಪಡಿ) ನಿಯಮಗಳು 2012 ಎಂದು ಕರೆಯತಕ್ಕದ್ದು.

(2) ಈ ನಿಯಮಗಳು ಅಧಿಕೃತ ರಾಜ್ಯಪತ್ರದಲ್ಲಿ ಪ್ರಕಟವಾದ ದಿನಾಂಕದಿಂದ ಜಾರಿಗೆ ಬರತಕ್ಕದ್ದು.

**2. ನಿಯಮ 14 ರ ತಿದ್ದುಪಡಿ:–** ಕರ್ನಾಟಕ ಸರ್ಕಾರಿ ನೌಕರರ (ವೈದ್ಯಕೀಯ ಹಾಜರಾತಿ) ನಿಯಮಗಳು 1963 (ಇನ್ನು ಮುಂದೆ ಸದರಿ ನಿಯಮಗಳೆಂದು ಉಲ್ಲೇಖಿಸಿದೆ)ರ ನಿಯಮ 14 ರ ಉಪ ನಿಯಮ (3) ರಲ್ಲಿ, `ಟಿಪ್ಪಣಿ` ಯ ನಂತರ ಈ ಮುಂದಿನ ಪರಂತುಕವನ್ನು ಸೇರಿಸತಕ್ಕದ್ದು, ಅಂದರೆ;

**"ಪರಂತು, ಆಂಜಿಯೋಪ್ಲಾಸ್ಟಿ ಹಾಗೂ ಇದೇ ರೀತಿಯ ಕಾರ್ಯವಿಧಾನಗಳಲ್ಲಿ ಸ್ಟಂಟ್‌ಗಳನ್ನು ಉಪಯೋಗಿಸಿದಲ್ಲಿ ಇದರ ವೆಚ್ಚವನ್ನು ಸರ್ಕಾರಿ ಆಸ್ಪತ್ರೆಗಳು ಅಥವಾ ಸರ್ಕಾರಿ ವೈದ್ಯಕೀಯ ಸಂಸ್ಥೆಗಳು ಅಥವಾ ಷೆಡ್ಯೂಲ್–I ರಲ್ಲಿ ನಿರ್ದಿಷ್ಟಪಡಿಸಿರುವ ಮಾನ್ಯತೆ ಹೊಂದಿದ ಆಸ್ಪತ್ರೆಗಳು ಮತ್ತು ವೈದ್ಯಕೀಯ ಸಂಸ್ಥೆಗಳು ಇಲ್ಲಿ ಚಿಕಿತ್ಸೆ ಪಡೆದಲ್ಲಿ ಕಾಲಕಾಲಕ್ಕೆ ಭಾರತ ಸರ್ಕಾರದ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯವು ಕೇಂದ್ರ ಸರ್ಕಾರದ ಆರೋಗ್ಯ ಸೇವೆಗಳು (ಸಿಜಿಹೆಚ್‌ಎಸ್) ಅಡಿಯಲ್ಲಿ ವಿಧಿಸಿರುವ ಷರತ್ತುಗಳನ್ವಯ ನಿಗದಿಪಡಿಸಿರುವ ಅಥವಾ ನಿಗದಿಪಡಿಸಬಹುದಾದ ದರಗಳಂತೆ ಮರುಪಾವತಿಸಲು ಅವಕಾಶ ಕಲ್ಪಿಸಲಾಗಿದೆ".**

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಡಿ. ನಾಗೇಶ್ ಪಾಟಕ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ
(ಸೇವಾ ನಿಯಮಗಳು)

## PERSONNEL AND ADMINISTRATIVE REFORMS SECRETARIAT

### NOTIFICATION

### No. DPAR 15 SMR 2010, Bangalore, dated: 12.4.2012

Whereas the draft of the following rules further to amend the Karnataka Government Servants' (Medical Attendance) Rules, 1963 was published as required by sub-section (2) of Section 3 of the Karnataka State Civil Services Act, 1978 (Karnataka Act 14 of 1990) in Notification No. DPAR 15 SMR 2010 dated 19-03-2012 in Part IV-A, No. 193, of the Karnataka Extraordinary Gazette dated 19-03-2012 inviting objections/suggestions from the persons likely to be affected thereby within 15 days from the date of its publication in the official Gazette.

And whereas the said Gazette was made available to the public on 19-03-2012.

And, whereas no objections / suggestions have been received by the State Government on the said draft.

Now, therefore, in exercise of the powers conferred by sub-section (1) of section 3 read with section 8 of the Karnataka State Civil Services Act, 1978 (Karnataka Act 14 of 1990), the Government of Karnataka hereby makes the following rules, namely :-

### RULES

**1. Title and commencement**:- (1) These rules may be called the Karnataka Government Servants' (Medical Attendance) (Amendment) Rules, 2012.

(2) They shall come into force from the date of their publication in the official Gazette.

**2. Amendment of rule 14**:- In the Karnataka Government Servants' (Medical Attendance) Rules, 1963 (hereinafter referred to as the said rules), in rule 14, in sub rule (3), after the `Note` the following proviso shall be inserted, namely:-

**"Provided that the reimbursement of the cost of the Stents used in angioplasty and such other procedure shall be allowed if the treatment is taken in the Government hospitals or Government medical institutions or authorized hospitals and medical institutions specified in Schedule-I at the rates fixed or as may**

**be fixed and with the conditions specified by the Ministry of Health and Family Welfare, Government of India under the Central Government Health Services (CGHS) from time to time."**

**By Order and in the name of the Governor of Karnataka,**

**D. NAGESH PHATAK**
Under Secretary to Government,
Department of Personnel and Administrative Reforms (Service Rules)

# ವಿಶೇಷ ಪತ್ರಿಕೆ

| ಭಾಗ – **V** | ಬೆಂಗಳೂರು, ಶುಕ್ರವಾರ, ಏಪ್ರಿಲ್ ೧೩, ೨೦೧೨ (ಚೈತ್ರ ೨೪, ಶಕ ವರ್ಷ ೧೯೩೪) | ನಂ. ೨೭೩ |
|---|---|---|

## ಶಿಕ್ಷಣ ಸಚಿವಾಲಯ

**ಸಾರ್ವಜನಿಕ ಶಿಕ್ಷಣ ಇಲಾಖೆ**

**ಆಯ್ಕೆ ಪ್ರಾಧಿಕಾರಿ ಹಾಗೂ ವಿಭಾಗೀಯ ಸಹನಿರ್ದೇಶಕರು, ಸಾರ್ವಜನಿಕ ಶಿಕ್ಷಣ ಇಲಾಖೆ, ಆಯುಕ್ತರ ಕಛೇರಿ, ಬೆಂಗಳೂರು ವಿಭಾಗ, ಬೆಂಗಳೂರು-01 ಇವರ ಕಾರ್ಯಾಲಯ**

**ತಿದ್ದುಪಡಿ ಅಧಿಸೂಚನೆ**

**ಸಂಖ್ಯೆ: ಅ1/ಪ್ರೌಶಾಶಿನೇ/01/2012-13, ಬೆಂಗಳೂರು, ದಿನಾಂಕ: 12ನೇ ಏಪ್ರಿಲ್ 2012**

2012-13ನೇ ಸಾಲಿನಲ್ಲಿ ಸಾರ್ವಜನಿಕ ಶಿಕ್ಷಣ ಇಲಾಖೆ, **ಬೆಂಗಳೂರು ವಿಭಾಗ**, ಮಟ್ಟದಲ್ಲಿ ಸಂಯುಕ್ತ ಸ್ಪರ್ಧಾತ್ಮಕ ಪರೀಕ್ಷೆಯ ಮೂಲಕ ಸರ್ಕಾರಿ ಪ್ರೌಢ ಶಾಲೆಗಳು, ಆದರ್ಶ ವಿದ್ಯಾಲಯಗಳು ಮತ್ತು ಆರ್.ಎಂ.ಎಸ್.ಎ ಅಡಿಯಲ್ಲಿ ಉನ್ನತೀಕರಿಸಲಾದ ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆಗಳಲ್ಲಿನ ಪ್ರೌಢಶಾಲಾ ಸಹಾಯಕ ಶಿಕ್ಷಕರು ಗ್ರೇಡ್-2 ಹಾಗೂ ದೈಹಿಕ ಶಿಕ್ಷಣ ಶಿಕ್ಷಕರು ಗ್ರೇಡ್-1 ವೃಂದದ ಹುದ್ದೆಗಳಿಗೆ ನೇರ ನೇಮಕಾತಿ ಮೂಲಕ ಶಿಕ್ಷಕರನ್ನು ಆಯ್ಕೆ ಮಾಡುವ ಸಂಬಂಧದಲ್ಲಿ **ಸಂಖ್ಯೆ: ಅ1/ಪ್ರೌಶಾಶಿನೇ/01/2012-13, ದಿನಾಂಕ: 2.4.2012** (ಕರ್ನಾಟಕ ರಾಜ್ಯ ವಿಶೇಷ ರಾಜ್ಯ ಪತ್ರ ಭಾಗ-V, ನಂ. 259)ರ ರೀತ್ಯಾ ಹೊರಡಿಸಲಾಗಿದ್ದುದು ಸರಿಯಷ್ಟೆ. ಸದರಿ ಅಧಿಸೂಚನೆಯಲ್ಲಿ ಆನ್-ಲೈನ್‌ನಲ್ಲಿ ಅರ್ಜಿ ದೊರೆಯುವ ದಿನಾಂಕ ಹಾಗೂ ಅರ್ಜಿ ಸಲ್ಲಿಸುವ ಕೊನೆಯ ದಿನಾಂಕವನ್ನು ಕ್ರಮವಾಗಿ 10.04.2012 ಮತ್ತು 10.05.2012 ಎಂಬುದಾಗಿ ನಿಗದಿಪಡಿಸಲಾಗಿತ್ತು. ಸದರಿ ದಿನಾಂಕಗಳನ್ನು ಕೆಳಕಂಡಂತೆ ಪರಿಷ್ಕರಿಸಿ ತಿದ್ದುಪಡಿ ಮಾಡಿದೆ. ಉಳಿದಂತೆ ಹುದ್ದೆಗೆ ನಿಗದಿಪಡಿಸಿರುವ ವಿದ್ಯಾರ್ಹತೆ, ಪರೀಕ್ಷಾ ವೇಳಾಪಟ್ಟಿ ಹಾಗೂ ಇನ್ನಿತರೆ ಮಾಹಿತಿಗಳಲ್ಲಿ ಯಾವುದೇ ಬದಲಾವಣೆ ಇರುವುದಿಲ್ಲ.

**ಆನ್‌ಲೈನ್‌ನಲ್ಲಿ ಅರ್ಜಿ ದೊರೆಯುವ ದಿನಾಂಕ: 16.04.2012**

**ಅರ್ಜಿ ಸಲ್ಲಿಸಲು ಕೊನೆಯ ದಿನಾಂಕ: 16.05.2012**

**ಎಸ್.ಎಲ್.ಚವ್ಹಾಣ್**
ಆಯ್ಕೆ ಪ್ರಾಧಿಕಾರಿ ಹಾಗೂ ಸಹನಿರ್ದೇಶಕರು,
ಸಾರ್ವಜನಿಕ ಶಿಕ್ಷಣ ಇಲಾಖೆ,
ಬೆಂಗಳೂರು ವಿಭಾಗ, ಬೆಂಗಳೂರು

# ವಿಶೇಷ ಪತ್ರಿಕೆ

| ಭಾಗ – **III** | ಬೆಂಗಳೂರು, ಮಂಗಳವಾರ, ಏಪ್ರಿಲ್ ೧೭, ೨೦೧೨ (ಚೈತ್ರ ೨೮, ಶಕ ವರ್ಷ ೧೯೩೪) | ನಂ. ೨೮೧ |
|---|---|---|

## ಕಂದಾಯ ಸಚಿವಾಲಯ

**ಅಧಿಸೂಚನೆ**

**ನಮೂನೆ – 29**

**68ನೇ ಪ್ರಕರಣದ (5)ನೇ ಉಪ-ಪ್ರಕರಣದ ಮೇರೆಗಿನ ಘೋಷಣೆ – ನಿಯಮ 96**

**ಸಂಖ್ಯೆ: ಆರ್‌ಡಿ 241 ಎಲ್‌ಜಿಬಿ 2012, ಬೆಂಗಳೂರು, ದಿನಾಂಕ: 10ನೇ ಏಪ್ರಿಲ್, 2012**

ಕರ್ನಾಟಕ ಭೂ ಕಂದಾಯ ಅಧಿನಿಯಮ (1964)ರ 68ನೇ ಪ್ರಕರಣದ (5)ನೇ ಉಪ ಪ್ರಕರಣದಿಂದ ಪ್ರದತ್ತವಾದ ಅಧಿಕಾರ ಚಲಾಯಿಸಿ, ಸದರಿ ಪ್ರಕರಣದ (1)ನೇ ಉಪ ಪ್ರಕರಣದ ಮೇರೆಗೆ ಜಿಲ್ಲಾಧಿಕಾರಿ, ಬೆಂಗಳೂರು ಇವರು ಹೊರಡಿಸಿದ 17.12.2011ರ ದಿನಾಂಕದ ಎಲ್‌ಎನ್‌ಡಿ (ಪೂರ್ವ) ಸಿಆರ್.135/2011-12 ಕ್ರಮ ಸಂಖ್ಯೆಯ ಅಧಿಸೂಚನೆಯ ಅನುಸೂಚಿಯಲ್ಲಿ ನಿರ್ದಿಷ್ಟಪಡಿಸಿದ ಮತ್ತು ಕೆಳಗಿನ ಅನುಸೂಚಿಯಲ್ಲಿ

ನಿರ್ದಿಷ್ಟಪಡಿಸಿದ ಖರಾಬು ಜಮೀನು ಸಾರ್ವಜನಿಕರ ಉಪಯೋಗಕ್ಕೆ ಅಗತ್ಯವಿಲ್ಲವೆಂದು ಸಂಬಂಧಪಟ್ಟ ದಾಖಲಾತಿಗಳನ್ನು ಮತ್ತು ಬೆಂಗಳೂರು ಜಿಲ್ಲಾಧಿಕಾರಿ ಇವರ ವರದಿಯನ್ನು ರಾಜ್ಯ ಸರ್ಕಾರವು ಪರಿಶೀಲಿಸಿದ ತರುವಾಯ, ಸರ್ಕಾರಿ ಹಳ್ಳದ ಜಮೀನಿನ ಮೇಲಣ ಸಾರ್ವಜನಿಕರ ಹಾಗೂ ವ್ಯಕ್ತಿಗಳ ಎಲ್ಲಾ ಹಕ್ಕುಗಳು ಕೊನೆಗೊಳ್ಳತಕ್ಕುದೆಂದು ಈ ಮೂಲಕ ಘೋಷಿಸಿದೆ.

**ಅನುಸೂಚಿ**

| ಕ್ರ.ಸಂ. | ಗ್ರಾಮ | ದೊಡ್ಡ ಗುಬ್ಬಿ |
|---|---|---|
| 1. | ತಾಲ್ಲೂಕು | ಬೆಂಗಳೂರು ಪೂರ್ವ ತಾಲ್ಲೂಕು |
| 2. | ಜಿಲ್ಲೆ | ಬೆಂಗಳೂರು ನಗರ |
| 3. | ಸದರಿ ಭಾಗದ ವರ್ಣನೆ | ಸರ್ಕಾರಿ ಹಳ್ಳ |
| 4. | ಸರಿ ಸುಮಾರು ವಿಸ್ತೀರ್ಣ | 0.02 ಗುಂಟೆ |
| 5. | ಸ.ನಂ. 107/3ರ ವಿಸ್ತೀರ್ಣ 0.02 ಗುಂಟೆ ಜಮೀನಿನ ಚಕ್ಕುಬಂದಿ | ಪೂರ್ವಕ್ಕೆ : ಬಂಡಿದಾರಿ<br>ಪಶ್ಚಿಮಕ್ಕೆ : ಸ.ನಂ. 106 ಸರ್ಕಾರಿ ಗುಂಡುತೋಪು<br>ಉತ್ತರಕ್ಕೆ : ದೊಡ್ಡಗುಬ್ಬಿ–ಚಿಕ್ಕಗುಬ್ಬಿ–ಸರ್ಕಾರಿ ರಸ್ತೆ<br>ದಕ್ಷಿಣಕ್ಕೆ : ರಾಜಕಾಲುವೆ |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಬಿ.ಕೆ.ರಾಮಸ್ವಾಮಿ**
ಸರ್ಕಾರದ ಅಧೀನ ಕಾರ್ಯದರ್ಶಿ
ಕಂದಾಯ ಇಲಾಖೆ (ಭೂ.ಮಂ.)

# ವಿಶೇಷ ಪತ್ರಿಕೆ

| ಭಾಗ – V | ಬೆಂಗಳೂರು, ಶುಕ್ರವಾರ, ಏಪ್ರಿಲ್ ೧೩, ೨೦೧೨ (ಚೈತ್ರ ೨೪, ಶಕ ವರ್ಷ ೧೯೩೪) | ನಂ. ೨೭೭ |
|---|---|---|

## ಪದವಿ ಪೂರ್ವ ಶಿಕ್ಷಣ ಇಲಾಖೆ

### ವಿಶೇಷ ನೇಮಕಾತಿ ಸಮಿತಿ

ಆಯುಕ್ತರ ಕಚೇರಿ, ಪದವಿ ಪೂರ್ವ ಶಿಕ್ಷಣ ಇಲಾಖೆ, 18ನೇ ಅಡ್ಡರಸ್ತೆ, ಸಂಪಿಗೆ ರಸ್ತೆ, ಮಲ್ಲೇಶ್ವರಂ, ಬೆಂಗಳೂರು 560 012

**ಅಧಿಸೂಚನೆ**

**ಸಂಖ್ಯೆಃ ಪಪೂಶಿ ವಿಶೇಷ ನೇಮಕ 01/2011-12, ಬೆಂಗಳೂರು, ದಿನಾಂಕಃ 13-04-2012**

1. ಪದವಿ ಪೂರ್ವ ಶಿಕ್ಷಣ ಇಲಾಖೆಯ ಸರ್ಕಾರಿ ಪದವಿ ಪೂರ್ವ ಕಾಲೇಜುಗಳಲ್ಲಿ ಖಾಲಿ ಇರುವ ಈ ಕೆಳಕಂಡ ವಿಷಯಗಳ ಒಟ್ಟು 1764 ಉಪನ್ಯಾಸಕರ ಹುದ್ದೆಗಳನ್ನು Karnataka Civil Service (Pre-University Education Department) (Recruitment to the Cadre of Lecturers of Government Pre-University Colleges) (Special) Rules, 2011 ರ ಪ್ರಕಾರ ವಿಶೇಷ ನೇಮಕಾತಿ ಮೂಲಕ ಭರ್ತಿ ಮಾಡಲು ಅರ್ಹ ಅಭ್ಯರ್ಥಿಗಳಿಂದ ನಿಗದಿಪಡಿಸಿರುವ ಅರ್ಜಿ ನಮೂನೆಯಲ್ಲಿ ಅರ್ಜಿಗಳನ್ನು www.schooleducation.kar.nic.in (ONLINE) ಮೂಲಕ ಆಹ್ವಾನಿಸಿದೆಃ–

| ಕ್ರಮ ಸಂಖ್ಯೆ | ವಿಷಯ | ಹುದ್ದೆಗಳ ಸಂಖ್ಯೆ | ಕ್ರಮ ಸಂಖ್ಯೆ | ವಿಷಯ | ಹುದ್ದೆಗಳ ಸಂಖ್ಯೆ |
|---|---|---|---|---|---|
| 1 | ಕನ್ನಡ | 148 | 9 | ಸಮಾಜಶಾಸ್ತ್ರ | 110 |
| 2 | ಇಂಗ್ಲೀಷ್ | 140 | 10 | ವಾಣಿಜ್ಯಶಾಸ್ತ್ರ | 135 |
| 3 | ಉರ್ದು | 07 | 11 | ಸಂಖ್ಯಾಶಾಸ್ತ್ರ | 01 |
| 4 | ಹಿಂದಿ | 09 | 12 | ಭೌತಶಾಸ್ತ್ರ | 223 |
| 5 | ಸಂಸ್ಕೃತ | 05 | 13 | ರಸಾಯನಶಾಸ್ತ್ರ | 220 |

| | | | | | |
|---|---|---|---|---|---|
| 6 | ಇತಿಹಾಸ | 101 | 14 | ಗಣಿತಶಾಸ್ತ್ರ | 234 |
| 7 | ಅರ್ಥಶಾಸ್ತ್ರ | 138 | 15 | ಜೀವಶಾಸ್ತ್ರ | 228 |
| 8 | ರಾಜ್ಯಶಾಸ್ತ್ರ | 65 | | | |

2. ಸದರಿ ಹುದ್ದೆಗಳಿಗೆ ಅರ್ಜಿಗಳನ್ನು www.schooleducation.kar.nic.in ಅಂತರ್ಜಾಲ ತಾಣದಲ್ಲಿ login ಆಗಿ ONLINE ಮೂಲಕವೇ ಸಲ್ಲಿಸಬೇಕು. ಇತರೆ ಯಾವುದೇ ನಮೂನೆಗಳಲ್ಲಿಯಾಗಲೀ ಅಥವಾ ಬೆರಳಚ್ಚು / ಫೋಟೋ ಪ್ರತಿ ಮಾಡಿರುವ, ಕೈ ಬರಹದಿಂದ ಸಲ್ಲಿಸಲ್ಪಡುವ ಅರ್ಜಿಗಳನ್ನು ತಿರಸ್ಕರಿಸಲಾಗುವುದು.

3. **ಒಂದಕ್ಕಿಂತ ಹೆಚ್ಚು ವಿಷಯದ ಉಪನ್ಯಾಸಕರ ಹುದ್ದೆಗೆ ಅರ್ಜಿ ಸಲ್ಲಿಸುವವರು ಒಂದೇ ಅರ್ಜಿಯಲ್ಲಿ ಆಧ್ಯತೆಯ ಪ್ರಕಾರ ಅರ್ಜಿಯನ್ನು ಸಲ್ಲಿಸುವುದು ಹಾಗೂ ವಿಷಯವಾರು ಪ್ರತ್ಯೇಕ ಅರ್ಜಿ ಸಲ್ಲಿಸಿದ್ದಲ್ಲಿ ಅಂತಹ ಅರ್ಜಿಗಳನ್ನು ಪರಿಗಣಿಸುವುದಿಲ್ಲ ಹಾಗೂ ಕಡ್ಡಾಯ ಕನ್ನಡ ಪತ್ರಿಕೆಯನ್ನು ಬರೆಯಲು ನೀಡಿರುವ ನೋಂದಣಿ ಸಂಖ್ಯೆಯ ಅರ್ಜಿಯಲ್ಲಿ ಯಾವ ಹುದ್ದೆ ಅಥವಾ ಹುದ್ದೆಗಳಿಗೆ ಅರ್ಜಿ ಸಲ್ಲಿಸಿರುವಿರೋ ಅದನ್ನು ಮಾತ್ರ ಪರಿಗಣಿಸಲಾಗುವುದು.**

   **ಟಿಪ್ಪಣಿಃ– ಅನುಸೂಚಿಯಲ್ಲಿ ತಿಳಿಸಿರುವ ತಾತ್ಕಾಲಿಕ ಹುದ್ದೆಗಳ ಸಂಖ್ಯೆ ಮತ್ತು ಮೀಸಲಾತಿ ವರ್ಗೀಕರಣವು ಅನಿವಾರ್ಯ ಸಂದರ್ಭದಲ್ಲಿ ಬದಲಾವಣೆಗೆ ಒಳಪಟ್ಟಿರುತ್ತದೆ.**

4. ಅರ್ಜಿಗಳನ್ನು ಸಲ್ಲಿಸಲು ಕೊನೆಯ ದಿನಾಂಕಃ 15.05.2012 ಆಗಿರುತ್ತದೆ ಹಾಗೂ ಚಲನ್ ಮೂಲಕ ಪಾವತಿಸಿರುವ ಶುಲ್ಕ ವಿವರಗಳನ್ನು ಅಪ್‌ಡೇಟ್ ಮಾಡಲು ಅರ್ಜಿಗಳನ್ನು ಸಲ್ಲಿಸಲು ನಿಗಧಿಪಡಿಸಿದ ಕೊನೆಯ ದಿನಾಂಕದಿಂದ 03 ದಿನಗಳವರೆಗೆ ಮಾತ್ರ ಅವಕಾಶವಿರುತ್ತದೆ.

5. **ಅರ್ಹತಾ ಷರತ್ತುಗಳು ಃ–**

   A) ಅಭ್ಯರ್ಥಿಯು ಭಾರತೀಯ ನಾಗರೀಕನಾಗಿರತಕ್ಕದ್ದು.

   B) ಅಭ್ಯರ್ಥಿಯು ಮಾನಸಿಕವಾಗಿ ಮತ್ತು ದೈಹಿಕವಾಗಿ ಆರೋಗ್ಯವಂತರಾಗಿರಬೇಕು ಮತ್ತು ಅವರ ನೇಮಕಾತಿಯು ಕರ್ತವ್ಯಗಳ ದಕ್ಷ ನಿರ್ವಹಣೆಗೆ ಆತಂಕವನ್ನುಂಟು ಮಾಡುವ ಸಂಭವ ಇರುವ ಯಾವುದೇ ದೈಹಿಕ ನ್ಯೂನತೆಯಿಂದ ಮುಕ್ತವಾಗಿರಬೇಕು.

   C) ದೈಹಿಕವಾಗಿ ಅನರ್ಹರಾಗಿದ್ದಾರೆಂಬುದಾಗಿ ವೈದ್ಯಕೀಯ ಮಂಡಳಿಯ ವರದಿಯ ಮೇಲೆ ಅನರ್ಹರೆಂಬುದಾಗಿ ತಿರಸ್ಕರಿಸುವ ಪೂರ್ಣ ವಿವೇಚನೆಯನ್ನು ರಾಜ್ಯ ಸರ್ಕಾರವು ಕಾದಿರಿಸಿಕೊಂಡಿದೆ ಮತ್ತು ಸರ್ಕಾರದ ವಿವೇಚನೆಯು ಯಾವುದೇ ವಿಧದಲ್ಲೂ ಈ ನಿಯಮಗಳ ಮೂಲಕ ಸೀಮಿತವಾಗಿರುವುದಿಲ್ಲ.

   D) ನಿಗದಿತ ಶೈಕ್ಷಣಿಕ ಅರ್ಹತೆಯ ಜೊತೆಗೆ ಈ ಮೇಲ್ಕಂಡ ಅರ್ಹತೆಗಳನ್ನು ಹೊಂದಿರುವ ಅಭ್ಯರ್ಥಿಗಳು ನೇಮಕಾತಿಗಾಗಿ ಅರ್ಜಿ ಸಲ್ಲಿಸಲು ಅರ್ಹತೆಯನ್ನು ಹೊಂದಿರುತ್ತಾರೆ.

6. **ನೇಮಕಾತಿ ವಿಧಾನ /ಆಯ್ಕೆ ವಿಧಾನ ಃ–**

   **1.** Karnataka Civil Service (Pre-University Education Department) (Recruitment to the Cadre of Lecturers of Government Pre-University Colleges) (Special) Rules, 2011 ರ ಪ್ರಕಾರ ಸ್ಪರ್ಧಾತ್ಮಕ ಪರೀಕ್ಷೆಯನ್ನು ಕೇಂದ್ರೀಯ ದಾಖಲಾತಿ ಘಟಕ, ಸಾರ್ವಜನಿಕ ಶಿಕ್ಷಣ ಇಲಾಖೆ ಇವರ ಮೂಲಕ ನಡೆಸಲಾಗುವುದು. ಅರ್ಹ ಅಭ್ಯರ್ಥಿಗಳ ಆಯ್ಕೆ ಪ್ರಕ್ರಿಯೆಯನ್ನು ಕೇಂದ್ರಿಯ ದಾಖಲಾತಿ ಘಟಕದ ಮೂಲಕವೇ ಮಾಡಲಾಗುವುದು

   **2. ಸ್ಪರ್ಧಾತ್ಮಕ ಪರೀಕ್ಷಾ ವಿಧಾನ ಃ**

   ಸ್ಪರ್ಧಾತ್ಮಕ ಪರೀಕ್ಷೆಯು ಸಂಬಂಧಪಟ್ಟ ವಿಷಯದ ಎರಡು ನಿರ್ಧಿಷ್ಟ ಪತ್ರಿಕೆ ಮತ್ತು ಒಂದು ಕನ್ನಡ ಭಾಷೆಯ ಪತ್ರಿಕೆಗಳನ್ನೊಳಗೊಂಡಿದ್ದು ವಸ್ತು ನಿಷ್ಠ ಬಹು ಆಯ್ಕೆ (Objective Multiple Choice) ಮಾದರಿಯದ್ದಾಗಿರುತ್ತದೆ. ಉತ್ತರ ಪತ್ರಿಕೆಯು OMR ಮಾದರಿಯಲ್ಲಿ ಇರುತ್ತದೆ.

   **3. ಕನ್ನಡ ಭಾಷಾ ಮತ್ತು ನಿರ್ಧಿಷ್ಟ ಪತ್ರಿಕೆ ಃ–**

   1. **ಕನ್ನಡ ಭಾಷಾ ಪತ್ರಿಕೆ – 150 ಅಂಕಗಳು** – 3 ಗಂಟೆಗಳು ಃ–

   A) ಈ ಪತ್ರಿಕೆಯಲ್ಲಿ 150 ಪ್ರಶ್ನೆಗಳಿರುತ್ತವೆ.

   B) ಈ ಪತ್ರಿಕೆಯು ಎಸ್‌ಎಸ್‌ಎಲ್‌ಸಿಯ ಕನ್ನಡ ಪ್ರಥಮ ಭಾಷೆ ಮಟ್ಟದ್ದಾಗಿರುತ್ತದೆ ಹಾಗೂ ಇದರ ಪಠ್ಯಕ್ರಮ ಕರ್ನಾಟಕ ಗೆಜೆಟೆಡ್ ಪ್ರೊಬೇಷನರ್ಸ್ (ಸ್ಪರ್ಧಾತ್ಮಕ ಪರೀಕ್ಷೆ ಮೂಲಕ ನೇಮಕಾತಿ) ನಿಯಮಗಳು 1997ರಲ್ಲಿ ನಿಗದಿಪಡಿಸಿದಂತೆ ಇರುತ್ತದೆ. ಆಯ್ಕೆಗೆ ಅರ್ಹರಾಗಲು ಈ ಪರೀಕ್ಷೆಯಲ್ಲಿ ಅಭ್ಯರ್ಥಿಯು ಕನಿಷ್ಠ 50 ಅಂಕಗಳನ್ನು ಪಡೆಯಲೇಬೇಕು.

   C) **ಈ ಪತ್ರಿಕೆಯಲ್ಲಿ ನೆಗೆಟಿವ್ ಮೌಲ್ಯಮಾಪನ ಇರುವುದಿಲ್ಲ.**

   D) ಆದರೆ ಈ ಪರೀಕ್ಷೆಯಲ್ಲಿ ಪಡೆದ ಅಂಕಗಳನ್ನು ಮೆರಿಟ್ ಲಿಸ್ಟ್ ಸಿದ್ದಪಡಿಸಲು ಪರಿಗಣಿಸಲಾಗುವುದಿಲ್ಲ.

2. **ನಿರ್ದಿಷ್ಟ ಪತ್ರಿಕೆ–1 ಮತ್ತು 2** (Specific Paper -1 & 2) **ಪ್ರತಿ ಪತ್ರಿಕೆಗೆ 150 ಅಂಕಗಳು ಹಾಗೂ 3 ಗಂಟೆ ಕಾಲಾವಧಿಯದ್ದಾಗಿರುತ್ತದೆ.**

A) ಈ ಪತ್ರಿಕೆಗಳು ಅಭ್ಯರ್ಥಿಯು ಅರ್ಜಿ ಸಲ್ಲಿಸುವ ಹುದ್ದೆ ವಿಷಯಕ್ಕೆ ಸಂಬಂಧಿಸಿರುತ್ತದೆ ಹಾಗೂ ಆನ್‌ಲೈನ್ ಮೂಲಕ ಅರ್ಜಿ ಭರ್ತಿ ಮಾಡಲು ನೀಡಿರುವ ಸೂಚನೆಯೊಂದಿಗೆ ಇರುವ ಪಠ್ಯಕ್ರಮಕ್ಕೆ ಸೀಮಿತವಾಗಿರುತ್ತದೆ. ವಸ್ತುನಿಷ್ಠ ಬಹು ಆಯ್ಕೆ (Objective Multiple Choice) ಪತ್ರಿಕೆಯ ಮೌಲ್ಯ ಮಾಪನವು ನಕಾರಾತ್ಮಕ ಮೌಲ್ಯಮಾಪನ (NEGATIVE VALUATION) ಮಾದರಿಯದ್ದಾಗಿರುತ್ತದೆ. ಪ್ರತಿ ತಪ್ಪು ಉತ್ತರಕ್ಕೆ 0.25 ಅಂಕಗಳನ್ನು ಕಳೆಯಲಾಗುವುದು. ಈ ನಿರ್ದಿಷ್ಟ ಪತ್ರಿಕೆಗಳಲ್ಲಿ ಕನಿಷ್ಠ ಅಂಕದ ಮಿತಿ ಇರುವುದಿಲ್ಲ. **ಆದರೆ ಎಲ್ಲಾ ಅಭ್ಯರ್ಥಿಗಳು ಕನ್ನಡ ಮತ್ತು ಇತರೆ ನಿರ್ದಿಷ್ಟ ಪತ್ರಿಕೆಗಳ ಪರೀಕ್ಷೆಗೆ ಹಾಜರಾಗುವುದು ಕಡ್ಡಾಯವಾಗಿರುತ್ತದೆ.**

B) ನಿರ್ದಿಷ್ಟ ಪತ್ರಿಕೆಗಳ ಹಾಗೂ ಕನ್ನಡ ಭಾಷಾ ಪತ್ರಿಕೆಗೆ ಸಂಬಂಧಿಸಿದ ಪಠ್ಯ ಕ್ರಮವನ್ನು ಅಂತರ್ಜಾಲ www.schooleducation.kar.nic.in ಅಂತರ್ಜಾಲ ತಾಣದಲ್ಲಿ ಅಳವಡಿಸಲಾಗಿದೆ. ಪಠ್ಯಕ್ರಮವನ್ನು ಅಂತರ್ಜಾಲದಿಂದ ಪಡೆದು ಕೊಳ್ಳಬಹುದು. ಕನ್ನಡ ಭಾಷೆಯ ಮಾದರಿ ಪ್ರಶ್ನೆಪತ್ರಿಕೆಯನ್ನು ಸಹ ಅಂತರ್ಜಾಲದಲ್ಲಿ ಅಳವಡಿಸಿದೆ.

C) **ಸೂಚನೆಃ ಎಲ್ಲಾ ಭಾಷಾ ವಿಷಯಗಳನ್ನು ಹೊರತು ಪಡಿಸಿ,** ನಿರ್ದಿಷ್ಟ ಪತ್ರಿಕೆಗಳ ಪ್ರಶ್ನೆ ಪತ್ರಿಕೆಗಳು ಕನ್ನಡ ಮತ್ತು ಆಂಗ್ಲ ಭಾಷೆಗಳೆರಡರಲ್ಲೂ ಇರುತ್ತದೆ. ಕನ್ನಡ ಭಾಷೆಯಲ್ಲಿರುವ ಪ್ರಶ್ನೆಗಳ ಭಾಷಾಂತರದಲ್ಲಿ ಏನಾದರೂ ಅಸ್ಪಷ್ಟತೆ ಇದ್ದಲ್ಲಿ ಅಭ್ಯರ್ಥಿಗಳು ಆಂಗ್ಲ ಭಾಷೆಯಲ್ಲಿರುವ ಪ್ರಶ್ನೆಗಳನ್ನು ಅಥವಾ ಇಂಗ್ಲೀಷ್‌ನಲ್ಲಿ ಅಸ್ಪಷ್ಟತೆ ಇದ್ದಲ್ಲಿ ಕನ್ನಡ ಭಾಷೆಯಲ್ಲಿರುವ ಪ್ರಶ್ನೆಗಳನ್ನು ನೋಡುವುದು.

3. ಸ್ನಾತಕೋತ್ತರ ಪದವಿಯಲ್ಲಿ ಪಡೆದಿರುವ ಅಂಕಗಳನ್ನು ಹುದ್ದೆಯ ಆಯ್ಕೆಗಾಗಿ ಪರಿಗಣಿಸಲಾಗುವುದಿಲ್ಲ.

4. ಸ್ಪರ್ಧಾತ್ಮಕ ಪರೀಕ್ಷೆಯಲ್ಲಿ ಗಳಿಸಿದ ಅಂಕಗಳನ್ನು ಮಾತ್ರ ಆಯ್ಕೆಗಾಗಿ ಪರಿಗಣಿಸಲಾಗುವುದು.

**ವಿಶೇಷ ಸೂಚನೆಃ** ನಿಯಮಾನುಸಾರ ದೃಷ್ಟಿಮಾಂದ್ಯ ಅಭ್ಯರ್ಥಿಗಳಿಗೆ ಸ್ಪರ್ಧಾತ್ಮಕ ಪರೀಕ್ಷೆಯನ್ನು ಬರೆಯಲು ಆಯಾ ಪರೀಕ್ಷಾ ಕೇಂದ್ರದ ಮುಖ್ಯ ಅಧೀಕ್ಷಕರು, ಇವರು ಸಹಾಯವನ್ನು ನೀಡುವ ಬಗ್ಗೆ ಪರೀಕ್ಷೆಯ ಮುನ್ನ ಕ್ರಮ ಕೈಗೊಳ್ಳುವರು. ಈ ಬಗ್ಗೆ ಮುಖ್ಯ ಅಧೀಕ್ಷಕರಿಗೆ ಸೂಚನೆ ನೀಡಲಾಗಿರುತ್ತದೆ. **ಈ ಸೌಲಭ್ಯವು ಅಭ್ಯರ್ಥಿಯು ತನ್ನ ಅರ್ಜಿಯಲ್ಲಿ ಕೋರಿದ್ದಲ್ಲಿ ಮಾತ್ರ ನೀಡಲಾಗುವುದು. ಅಂತಹ ಅಭ್ಯರ್ಥಿಗಳು ಪರೀಕ್ಷಾ ದಿನದಂದು ವಿಕಲಚೇತನರ ಪ್ರಮಾಣ ಪತ್ರವನ್ನು ಕಡ್ಡಾಯವಾಗಿ ಪರೀಕ್ಷಾ ಕೇಂದ್ರದ ಮುಖ್ಯ ಅಧೀಕ್ಷಕರಿಗೆ ಸಲ್ಲಿಸುವುದು.**

**7. ಶೈಕ್ಷಣಿಕ ವಿದ್ಯಾರ್ಹತೆ, ವೇತನ ಶ್ರೇಣಿ ಮತ್ತು ವಯೋಮಿತಿ ಃ–**

a) **ಶೈಕ್ಷಣಿಕ ವಿದ್ಯಾರ್ಹತೆ** ಃ– ಅರ್ಜಿಗಳನ್ನು ಸ್ವೀಕರಿಸಲು ನಿಗದಿಪಡಿಸಿದ ಕೊನೆಯ ದಿನಾಂಕದಂದು ಕನಿಷ್ಠ ವಿದ್ಯಾರ್ಹತೆಯನ್ನು ಅಭ್ಯರ್ಥಿಗಳು ಹೊಂದಿರಲೇಬೇಕು. ನಿಗದಿಪಡಿಸಿರುವ ವಿದ್ಯಾರ್ಹತೆಯನ್ನು ಹೊಂದದೆ ಹೆಚ್ಚಿನ ವಿದ್ಯಾರ್ಹತೆಯನ್ನು ಹೊಂದಿದ್ದರೂ ಸಹ ಪರಿಗಣಿಸಲಾಗುವುದಿಲ್ಲ.

b) ಪ್ರಕಟಿಸಿರುವ ಹುದ್ದೆಗಳಿಗೆ ನಿಗದಿಪಡಿಸಿರುವ ವಿದ್ಯಾರ್ಹತೆ, ವಯೋಮಿತಿ, ಮೀಸಲಾತಿ ಇತ್ಯಾದಿ ವಿವರಗಳು ಅರ್ಜಿಗಳನ್ನು ಸ್ವೀಕರಿಸಲು ನಿಗದಿಪಡಿಸಿರುವ ಕೊನೆಯ ದಿನಾಂಕಕ್ಕೆ ಮೊದಲು ಅಭ್ಯರ್ಥಿಗಳು ಹೊಂದಿರಬೇಕು ಮತ್ತು ಚಾಲ್ತಿಯಲ್ಲಿರಬೇಕು.

c) Passed Master Degree at least in Second Class in a subject specified in corresponding entries in column (3) of the Schedule with a Bachelor Degree of Education (B.Ed.) or its equivalent;

"Provided that the persons having master degree in Second Class in respective subjects, and appointed under the rules, shall pass bachelor degree of education (B.Ed.) or its equivalent at their own cost, within four years from the date of appointment.

Provided further that, notwithstanding anything contained in the Karnataka Civil Services (Probation) Rules, 1977, the period of probation shall be four years for the persons appointed under these rules.

Provided also that candidates appointed under these rules, who have not passed B.Ed. or its equivalent with in a period of four years from the date of appointment, shall be discharged from service"

(ಸರ್ಕಾರದ ತಿದ್ದುಪಡಿ ಸಂಖ್ಯೆಃ ಇಡಿ 60 ಟಿಪಿಯು 2010 ದಿನಾಂಕಃ 11.04.2012 ರ ಪ್ರಕಾರ)

| SL. No. | Subject | | QUALIFICATION |
|---|---|---|---|
| | | | Second Class Master's Degree in:- |
| 1. | Lecturer in Kannada | - | Kannada or Kannada language Literature or Kannada and Janapada or Janapada Sahitya. Kannada Sahitya & Shasana Shastra, Kannada Sahitya & Bhasa Shastra, Kannada Sahitya Bhashanthara & Taulanika Adyayana |
| 2. | Lecturer in English | - | English |
| 3. | Lecturer in Urdu | - | Urdu or Persian |
| 4. | Lecturer in Sanskrit | - | Sanskrit or Vidwat |
| 5. | Lecturer in History | - | History or Ancient History & Archeology, Ancient India History & Epigraphy |
| 6. | Lecturer in Economics | - | Economics |
| 7. | Lecturer in Sociology | - | Sociology or Social work |
| 8. | Lecturer in Physics | - | Physics |
| 9. | Lecturer in Mathematics | - | Mathematics or Applied Mathematics |
| 10. | Lecturer in Biology | - | Botany or Zoology or Life Science or Bio Science or Applied Botany or Applied Zoology |
| 11. | Lecturer in Commerce | - | Commerce |
| 12. | Lecturer in Hindi | - | Hindi or Ratna or Praveen |
| 13. | Lecturer in Political Science | - | Political Science |
| 14. | Lecturer in Statistics | - | M.A/M.Sc in Statistics |
| 15. | Lecturer in Chemistry | - | Chemistry or Physical Chemistry or Organic Chemistry or Inorganic Chemistry or Analytical Chemistry or Industrial Chemistry or Bio Chemistry or Applied Chemistry or Pharmaceutical Chemistry or Medicinal Chemistry or the candidate that who have completed the FIVE years Integrated M.Sc., Course in Chemistry or Applied Chemistry |

d) **ವೇತನ ಶ್ರೇಣಿ ಃ–** ರೂ. 11400–300–12300–350–14400–400–16800–450–19500–525–21600.

e) **ವಯೋಮಿತಿ ಃ–**

Karnataka Civil Service (Pre-University Education Department) (Recruitment to the Cadre of Lecturers of Government Pre-University Colleges) (Special) Rules, 2011 ರ ಪ್ರಕಾರ ಅರ್ಜಿಗಳನ್ನು ಸ್ವೀಕರಿಸಲು ನಿಗದಿಪಡಿಸಿದ ಕೊನೆಯ ದಿನಾಂಕದಂದು ಕನಿಷ್ಠ 18 ವರ್ಷಗಳು ತುಂಬಿರತಕ್ಕದ್ದು ಹಾಗೂ ಈ ಕೆಳಕಂಡ ಗರಿಷ್ಠ ವಯೋಮಿತಿಯನ್ನು ಮೀರಿರಬಾರದು.

| | | | |
|---|---|---|---|
| 1. | ಸಾಮಾನ್ಯ ಅರ್ಹತೆ | ಃ | 40 ವರ್ಷಗಳು. |
| 2. | ಪ್ರವರ್ಗ–2ಎ/2ಬಿ/3ಎ/3ಬಿ | ಃ | 43 ವರ್ಷಗಳು. |
| 3. | ಪರಿಶಿಷ್ಟ ಜಾತಿ / ಪರಿಶಿಷ್ಟ ಪಂಗಡ / ಪ್ರವರ್ಗ–1 | ಃ | 45 ವರ್ಷಗಳು |

4. ಮಾಜಿ ಸೈನಿಕರಿಗೆ ನಿಯಮಾನುಸಾರ ವಯೋಮಿತಿಯಲ್ಲಿ ಸಡಿಲಿಕೆ ಇರುತ್ತದೆ.

**8. ಜಾತಿ / ಮೀಸಲಾತಿ ಪ್ರಮಾಣ ಪತ್ರಗಳು ः–**

ಮೀಸಲಾತಿ ಕೋರಬಯಸುವ ಅಭ್ಯರ್ಥಿಗಳು ನಿಯಮಾನುಸಾರ ಚಾಲ್ತಿಯಲ್ಲಿರುವ ನಮೂನೆಗಳಲ್ಲಿ ಮೀಸಲಾತಿ / ಜಾತಿ ಪ್ರಮಾಣ ಪತ್ರಗಳನ್ನು ಸಲ್ಲಿಸಬೇಕು ः–

1. ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಕ್ಕೆ ಸೇರಿದ ಅಭ್ಯರ್ಥಿಗಳು ನಮೂನೆ 'ಡಿ" ರಲ್ಲಿ
2. ಪ್ರವರ್ಗ–1ಕ್ಕೆ ಸೇರಿದ ಅಭ್ಯರ್ಥಿಗಳು ನಮೂನೆ 'ಇ' ರಲ್ಲಿ
3. ಪ್ರವರ್ಗ–2ಎ, 2ಬಿ. 3ಎ ಮತ್ತು 3ಬಿ ಮೀಸಲಾತಿಗೆ ಸೇರಿದ ಅಭ್ಯರ್ಥಿಗಳು ನಮೂನೆ 'ಎಫ್' ರಲ್ಲಿ ಅರ್ಜಿ ಸಲ್ಲಿಸಲು ನಿಗದಿಪಡಿಸಿದ ಕೊನೆಯ ದಿನಾಂಕದೊಳಗೆ ಚಾಲ್ತಿಯಲ್ಲಿರುವ ಮೀಸಲಾತಿ ಪ್ರಮಾಣ ಪತ್ರವನ್ನು ಸಂಬಂಧಿತ ತಹಶೀಲ್ದಾರರಿಂದ ಪಡೆದಿಟ್ಟುಕೊಂಡಿರತಕ್ಕದ್ದು. ಆಯ್ಕೆಪ್ರಾಧಿಕಾರವು ಮೂಲ ದಾಖಲಾತಿಗಳನ್ನು ಪರಿಶೀಲನೆಗೆ ಸೂಚಿಸಿದಾಗ ತಪ್ಪದೇ ಹಾಜರುಪಡಿಸತಕ್ಕದ್ದು. ತಪ್ಪಿದಲ್ಲಿ ಅಂತಹ ಅಭ್ಯರ್ಥಿಗಳ ಮೀಸಲಾತಿಯನ್ನು ರದ್ದುಪಡಿಸಿ ಅವರ ಅಭ್ಯರ್ಥಿತನವನ್ನು ನಿಯಮಾನುಸಾರ ಸಾಮಾನ್ಯ ಅರ್ಹತೆಯಡಿಯಲ್ಲಿ ಪರಿಗಣಿಸಲಾಗುವುದು. (ಈ ಪ್ರಮಾಣ ಪತ್ರಗಳ ನಮೂನೆಗಳನ್ನು ತೋರಿಸಲಾಗಿದೆ).

**9. ಸಮತಳ ಮಿಸಲಾತಿ**

**9.1 ಗ್ರಾಮೀಣ ಅಭ್ಯರ್ಥಿ ः –**

ಸರ್ಕಾರಿ ಆದೇಶ ಸಂಖ್ಯೆः ಸಿಆಸುಇ 08 ಸೆನೆನಿ 2001 ದಿನಾಂಕः 13.02.2001 ರ ಅನ್ವಯ ಗ್ರಾಮೀಣ ಮೀಸಲಾತಿಯನ್ನು ಕೋರುವ ಅಭ್ಯರ್ಥಿಗಳು ಪ್ರಸ್ತುತ ಚಾಲ್ತಿಯಲ್ಲಿರುವ ನಿಯಮಗಳ ರೀತ್ಯಾ 1 ರಿಂದ 10 ನೇಯ ತರಗತಿಯವರೆಗೆ ಗ್ರಾಮೀಣ ಮೀಸಲಾತಿಗೆ ಒಳಪಡುವ ಪ್ರದೇಶಗಳಲ್ಲಿ ವ್ಯಾಸಂಗ ಮಾಡಿ ಉತ್ತೀರ್ಣರಾಗಿರಬೇಕು. ಗ್ರಾಮೀಣ ಅಭ್ಯರ್ಥಿಗಳಿಗೆಂದು ಮೀಸಲಿರಿಸಿದ **ಹುದ್ದೆಗಳಲ್ಲಿ ಆಯ್ಕೆ ಬಯಸುವ** ಸಾಮಾನ್ಯ ಅರ್ಹತೆಯ ಅಭ್ಯರ್ಥಿಗಳು ನಮೂನೆ–2ನ್ನು ಸಂಬಂಧಪಟ್ಟ ಕ್ಷೇತ್ರ ಶಿಕ್ಷಣಾಧಿಕಾರಿಯವರ ಮೇಲು ರುಜುವಿರುವ ಪ್ರಮಾಣ ಪತ್ರ ಹೊಂದಿರಬೇಕು. ಇದರ ಜೊತೆಯಲ್ಲಿ ಮೇಲುಸ್ತರಕ್ಕೆ ಸೇರಿಲ್ಲದಿರುವ ಬಗ್ಗೆ ನಮೂನೆ–1 ರಲ್ಲಿ ಪ್ರಮಾಣ ಪತ್ರವನ್ನು ಕಡ್ಡಾಯವಾಗಿ ಸಂಬಂಧಿತ ತಹಶೀಲ್ದಾರ್‌ರವರಿಂದ ಪಡೆದಿಟ್ಟುಕೊಂಡಿರತಕ್ಕದ್ದು.

ಅಂತೆಯೇ ಗ್ರಾಮೀಣ ಮೀಸಲಾತಿ ಕೋರುವ ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ, ಪ್ರವರ್ಗ– 1, ಪ್ರವರ್ಗ–2ಎ, 2ಬಿ, 3ಎ ಮತ್ತು 3ಬಿ ಮೀಸಲಾತಿಗೆ ಸೇರಿದ ಅಭ್ಯರ್ಥಿಗಳು ಕಡ್ಡಾಯವಾಗಿ ಗ್ರಾಮೀಣ ಮೀಸಲಾತಿಯ ಪ್ರಮಾಣ ಪತ್ರವನ್ನು ನಮೂನೆ–2 ರಲ್ಲಿ ಸಂಬಂಧಪಟ್ಟ ಕ್ಷೇತ್ರ ಶಿಕ್ಷಣಾಧಿಕಾರಿಯವರ ಮೇಲು ರುಜು ಪಡೆದಿಟ್ಟುಕೊಂಡಿರತಕ್ಕದ್ದು. ಆಯ್ಕೆ ಪ್ರಾಧಿಕಾರವು ಮೂಲ ದಾಖಲಾತಿಗಳನ್ನು ಪರಿಶೀಲನೆಗೆ ಸೂಚಿಸಿದಾಗ ತಪ್ಪದೇ ಹಾಜರುಪಡಿಸತಕ್ಕದ್ದು. ತಪ್ಪಿದಲ್ಲಿ ಅಂತಹ ಅಭ್ಯರ್ಥಿಗಳ ಮೀಸಲಾತಿಯನ್ನು ರದ್ದುಪಡಿಸಲಾಗುವುದು.

**9.2. ಕನ್ನಡ ಮಾಧ್ಯಮ ಅಭ್ಯರ್ಥಿ ः–**

ಸರ್ಕಾರಿ ಅಧಿಸೂಚನೆ ಸಂಖ್ಯೆः ಸಿಆಸುಇ 71 ಸೆನೆನಿ 2001 ದಿನಾಂಕः 24.10.2002ರನ್ವಯ ಕನ್ನಡ ಮಾಧ್ಯಮದ ಅಭ್ಯರ್ಥಿಗಳಿಗೆಂದು ಮೀಸಲಿರಿಸಿದ ಹುದ್ದೆಗಳನ್ನು ಕ್ಲೇಮು ಮಾಡುವ ಅಭ್ಯರ್ಥಿಗಳು 1ನೇ ತರಗತಿಯಿಂದ 10ನೇ ತರಗತಿಯವರೆಗೆ ಕನ್ನಡ ಮಾಧ್ಯಮದಲ್ಲಿ ವ್ಯಾಸಂಗ ಮಾಡಿರುವ ಬಗ್ಗೆ ಸಂಬಂಧಪಟ್ಟ ಶಾಲೆಯ ಮುಖ್ಯ ಶಿಕ್ಷಕರ ಸಹಿ ಹಾಗೂ ಮೊಹರು ಸಂಬಂಧಪಟ್ಟ ಪ್ರಮಾಣ ಪತ್ರದಲ್ಲಿ ಪಡೆದಿಟ್ಟುಕೊಂಡಿರತಕ್ಕದ್ದು. ಆಯ್ಕೆ ಪ್ರಾಧಿಕಾರವು ಮೂಲ ದಾಖಲಾತಿಗಳನ್ನು ಪರಿಶೀಲನೆಗೆ ಸೂಚಿಸಿದಾಗ ತಪ್ಪದೇ ಹಾಜರುಪಡಿಸತಕ್ಕದ್ದು. ತಪ್ಪಿದಲ್ಲಿ ಅಂತಹ ಅಭ್ಯರ್ಥಿಗಳ ಮಿಸಲಾತಿಯನ್ನು ರದ್ದುಪಡಿಸಲಾಗುವುದು. (ಈ ಪ್ರಮಾಣ ಪತ್ರಗಳ ನಮೂನೆಗಳನ್ನು ತೋರಿಸಲಾಗಿದೆ)

**9.3. ವಿಕಲಚೇತನ ಅಭ್ಯರ್ಥಿ ः –**

ಸರ್ಕಾರದ ಅಧಿಸೂಚನೆः ಡಿಪಿಎಆರ್ 50 ಎಸ್‌ಆರ್‌ಆರ್ 2000 ದಿನಾಂಕः 03.09.2005ರಲ್ಲಿ ರಾಜ್ಯ ಸಿವಿಲ್ ಸೇವೆಗಳ ಸಮೂಹ ಎ ಮತ್ತು ಬಿ ಗುಂಪಿನ ಹುದ್ದೆಗಳಿಗೆ ಶೇಕಡ 3 ರಷ್ಟು (ಸರ್ಕಾರದ ಅಧಿಸೂಚನೆः ಡಿಪಿಎಆರ್ 104 ಎಸ್‌ಆರ್‌ಆರ್ 2005 ದಿನಾಂಕः 13.09.2005ರ ಅನುಸೂಚಿಯಡಿ ಸೇರ್ಪಡೆ ಮಾಡಲಾಗಿರುವ ಇಲಾಖೆಗಳು) ಹುದ್ದೆಗಳನ್ನು ವಿಕಲಚೇತನರಿಗೆ ಮೀಸಲಾತಿ ಕಲ್ಪಿಸಿದ್ದು, ಇದರನ್ವಯ ಶೇಕಡ 40 ಕ್ಕಿಂತ ಕಡಿಮೆ ಇಲ್ಲದಂತಹ ವಿಕಲಚೇತನವುಳ್ಳ ಅಭ್ಯರ್ಥಿಗಳು ಮಾತ್ರ ಈ ಮೀಸಲಾತಿಯನ್ನು ಕೋರಲು ಅರ್ಹರು. ಸರ್ಕಾರದ ಅಧಿಕೃತ ಜ್ಞಾಪನ ಸಂಖ್ಯೆः ಸಿಆಸುಇ 115 ಸೆನೆನಿ 2005 ದಿನಾಂಕः 19.11.2005ರಲ್ಲಿ ನಿಗದಿಪಡಿಸಿರುವ ನಮೂನೆಯಲ್ಲಿ ವಿಕಲಚೇತನ ಬಗ್ಗೆ ಜಿಲ್ಲಾ ಮಟ್ಟದ ವೈದ್ಯಕೀಯ ಮಂಡಳಿಯಿಂದ ಪಡೆದಿಟ್ಟುಕೊಂಡಿರತಕ್ಕದ್ದು. ಆಯ್ಕೆ ಪ್ರಾಧಿಕಾರವು ಮೂಲ ದಾಖಲಾತಿಗಳನ್ನು ಪರಿಶೀಲನೆಗೆ ಸೂಚಿಸಿದಾಗ ತಪ್ಪದೇ ಹಾಜರುಪಡಿಸತಕ್ಕದ್ದು. ತಪ್ಪಿದಲ್ಲಿ ಅಂತಹ ಅಭ್ಯರ್ಥಿಗಳ ಮಿಸಲಾತಿಯನ್ನು ರದ್ದುಪಡಿಸಲಾಗುವುದು. ಇತರೆ ಯಾವುದೇ ನಮೂನೆಯಲ್ಲಿ ವಿಕಲಚೇತನ ಬಗ್ಗೆ ಪಡೆಯಲಾಗಿರುವ ಪ್ರಮಾಣ ಪತ್ರಗಳನ್ನು ಪರಿಗಣಿಸಲು ಬರುವುದಿಲ್ಲ. (ಈ ಪ್ರಮಾಣ ಪತ್ರಗಳ ನಮೂನೆಗಳನ್ನು ತೋರಿಸಲಾಗಿದೆ.)

